ಶ್ರೀಮನ್ನಿಗಮಾನ್ತಮಹಾದೇಶಿಕೈಃ

ಅನುಗೃಹೀತಾ

# ಸ್ತೋತ್ರರತ್ನಾವಲೀ

ಮೈಸೂರುನಗರ್ಯಾಮ್

ಶ್ರೀಮದಾಚಾರ್ಯಶ್ರೀಸೂಕ್ತಿಕೈಙ್ಕರ್ಯಸಭಯಾ

ಪ್ರಕಾಶಿತಾ

ಶ್ರೀಮನ್ನಿಗಮಾನ್ತಮಹಾದೇಶಿಕಾವತಾರಾದಿ ೬೭೦ ತಮ

ಶ್ರೀವಿಕ್ರಮಸಂವತ್ಸರವರ್ಷೇ

MYSORE

SREE PANCHACHARYA ELECTRIC PRESS,

1940

ಬೆಲೆ ರೂ. ೧-೪-೦]  [ಅಂಚೆಯ ವೆಚ್ಚ ಪ್ರತ್ಯೇಕ.

ಶ್ರೀಮನ್ನಿಗಮಾನ್ತಮಹಾದೇಶಿಕೈಃ

ಅನುಗೃಹೀತಾ

# ಸ್ತೋತ್ರರತ್ನಾವಲೀ

ಮೈಸೂರುಪುರ್ಯಾಮ್

ಶ್ರೀಮದಾಚಾರ್ಯಶ್ರೀಸೂಕ್ತಿಕೈಙ್ಕರ್ಯಸಭಯಾ

ಪ್ರಕಾಶಿತಾ

ಶ್ರೀಮನ್ನಿಗಮಾನ್ತಮಹಾದೇಶಿಕಾವತಾರಾದಿ ೬೭೦ ತಮ

ಶ್ರೀವಿಕ್ರಮಕನ್ಯಾಶ್ರವಣೇ

MYSORE

SREE PANCHACHARYA ELECTRIC PRESS,

1940

# ಮುನ್ನುಡಿ

ಕವಿತಾರ್ಕಿಕಸಿಂಹರೆಂದೂ ಸರ್ವತಂತ್ರಸ್ವತಂತ್ರರೆಂದೂ ಜಗದ್ವಿಖ್ಯಾತರಾದ ಶ್ರೀವೇದಾಂತದೇಶಿಕರವರ ಸ್ತೋತ್ರಾವಳಿಯ ಪ್ರತಿಗಳು ಈಗ ಉಪಲಬ್ಧವಾಗಿಲ್ಲದುದರಿಂದಲೂ ಇದುವರೆಗೆ ಬೇರೆಕಡೆಗಳಲ್ಲಿ ಮುದ್ರಿತವಾಗಿರುವುಗಳು ದೇವನಾಗರಿ ಅಥವಾ ತೆಲುಗು ಲಿಪಿಗಳಲ್ಲಿರುವುದರಿಂದ ಕನ್ನಡದೇಶದವರಿಗೆ ವಿಶೇಷ ಉಪಯೋಗವಾಗಿಲ್ಲವಾದುದರಿಂದಲೂ ಈ ಗ್ರಂಥವನ್ನು ಮೈಸೂರಿನಲ್ಲಿರುವ ಶ್ರೀಮದಾಚಾರ್ಯ ಶ್ರೀಸೂಕ್ತಿ ಕೈಂಕರ್ಯ ಸಭೆಯವರು ಈಗ ಅನೇಕ ಪ್ರಾಚೀನ ಪ್ರತಿಗಳ ಸಹಾಯದಿಂದ ಪರಿಷ್ಕರಿಸಿ ಪಾಠಾಂತರಗಳೊಡನೆ ಮೊದಲನೆಯಸಲ ಕನ್ನಡಲಿಪಿಯಲ್ಲಿ ಪ್ರಕಾಶಿಸಿದ್ದಾರೆ. ಗ್ರಂಥವು ವಿಶೇಷ ಉಪಕಾರಕವಾಗುವುದಕ್ಕಾಗಿ ಗ್ರಂಥಾದಿಯಲ್ಲಿ ಶ್ರೀಮದಾಚಾರ್ಯರ ಚರಿತ್ರೆಯೂ ಅವರ ಗ್ರಂಥಗಳ ವಿಮರ್ಶೆಯೂ ಗ್ರಂಥಾಂತ್ಯದಲ್ಲಿ ಸ್ತೋತ್ರಶ್ಲೋಕಗಳ ಅಕಾರಾದಿಯೂ ಕೊಟ್ಟಿದೆ. ಮಹಾಜನರು ಇದರ ಪೂರ್ಣ ಉಪಯೋಗವನ್ನು ಮಾಡಿಕೊಂಡು ಸಭೆಯ ಶ್ರಮವನ್ನು ಸಾರ್ಥಕಪಡಿಸಬೇಕೆಂದು ಸಭಾಸದಸ್ಯರು ವಿನಯದಿಂದ ಪ್ರಾರ್ಥಿಸುತ್ತಾರೆ.

ಈ ಗ್ರಂಥಕ್ಕೆ ಅಲಂಕಾರಭೂತವಾಗಿರುವ ಆಚಾರ್ಯರ ಪ್ರತಿಕೃತಿಯನ್ನು ಕೊಟ್ಟು ಸಹಾಯಮಾಡಿದ ಶ್ರೀ ಶ್ರೀ ಪರಕಾಲಮಠಕ್ಕೂ ಎಲ್ಲ ವಿಧವಾದ ತೊಂದರೆಯನ್ನೂ ವಹಿಸಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀಪಂಚಾಚಾರ್ಯ ವಿದ್ಯುನ್ಮುದ್ರಣಾಲಯದ ಅಧಿಕಾರಿಗಳಿಗೂ ಸಭೆಯು ತನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸೂಚಿಸುತ್ತದೆ.

**ಶ್ರೀಮದಾಚಾರ್ಯಶ್ರೀಸೂಕ್ತಿಕೈಂಕರ್ಯಸಭಾ,**
**ಮೈಸೂರು.**

# ವೇದಾಂತದೇಶಿಕರು ಮತ್ತು ಅವರ ಗ್ರಂಥಗಳು

ಪಿನ್ನೆಲಿ—ವೇದಾಂತದೇಶಿಕರ ಹುಟ್ಟುಹೆಸರು ವೇಂಕಟನಾಥಾಚಾರ್ಯರೆಂದು. ಇವರು ನಿಗಮಾಂತದೇಶಿಕರು, ವೇದಾಂತಾಚಾರ್ಯರು, ದೇಶಿಕರು ಎಂಬ ಬೇರೆ ಬೇರೆ ಹೆಸರುಗಳಿಂದಲೂ ಪ್ರಸಿದ್ಧರಾಗಿದ್ದಾರೆ. ಇವರಿಗೆ "ಕವಿತಾರ್ಕಿಕಸಿಂಹ" "ಸರ್ವತಂತ್ರಸ್ವತಂತ್ರ" ಎಂಬ ಬಿರುದುಗಳುಂಟು. ವಿಶಿಷ್ಟಾದ್ವೈತಸಿದ್ಧಾಂತದ ಇತಿಹಾಸದಲ್ಲಿ ಶ್ರೀರಾಮಾನುಜಾಚಾರ್ಯರಿಗೆ ಎಷ್ಟರಮಟ್ಟಿನ ಗೌರವವೂ ಪೂಜ್ಯತೆಯೂ ಪ್ರಾಮುಖ್ಯವೂ ಇದೆಯೋ ಅಷ್ಟೇ ಪೂಜ್ಯತೆಯೂ ಗೌರವವೂ ಇವರಿಗೂ ಸಲ್ಲುವುದು. ಈ ವಾಕ್ಯದ ಯಾಥಾರ್ಥ್ಯವು ಸುಲಭವಾಗಿ ಮನಸ್ಸಿಗೆ ಹಿಡಿಯಬೇಕಾದರೆ ಅವರ ಕಾಲದ ಪರಿಸ್ಥಿತಿಯ, ಅವರ ಜೀವನದ ಮತ್ತು ಕೃತಿಗಳ ಪರಿಚಯವು ಅತ್ಯಾವಶ್ಯಕ. ಇಂತಹ ಪರಿಚಯವನ್ನುಂಟುಮಾಡುವ ಗ್ರಂಥಗಳು (ಎಲ್ಲವೂ ಏಕಮುಖವಾಗಿರದಿದ್ದರೂ) ವಿಶಿಷ್ಟಾದ್ವೈತ ಗ್ರಂಥ ಸಮುದಾಯದಲ್ಲಿ ವಿಶೇಷವಾಗಿವೆ. ಅವುಗಳಲ್ಲಿ ಮುಖ್ಯವಾದುವುಗಳ ತೋಲನದಿಂದ ಈ ಪ್ರಬಂಧದಲ್ಲಿ ವೇದಾಂತಾಚಾರ್ಯರ ಮತ್ತು ಅವರ ಗ್ರಂಥಗಳ ಸಾಮಾನ್ಯ ಪರಿಚಯವನ್ನುಂಟುಮಾಡಿಕೊಡಲು ಪ್ರಯತ್ನಿಸಿದೆ.

ವೇದಾಂತಾಚಾರ್ಯರ ಕಾಲವು ರಾಜಕೀಯ ಮತ್ತು ಧಾರ್ಮಿಕ ದೃಷ್ಟಿಯಿಂದ ಒಂದು ಸಂಧಿಸಮಯ. ರಾಜಕೀಯ ದೃಷ್ಟಿಯಿಂದ ಅದು ಅತಿ ಭಯಂಕರವಾದ ಕಾಲ. ಈ ಕಾಲಕ್ಕೆ ಸುಮಾರು ಮುನ್ನೂರು ವರ್ಷಗಳ ಹಿಂದೆಯೇ ಉತ್ತರ ಹಿಂದೂಸ್ಥಾನದಲ್ಲಿ ಪ್ರಾರಂಭವಾಗಿದ್ದ ಮಹಮ್ಮದೀಯರ ಉಪದ್ರವವು ಆಗ ದಕ್ಷಿಣಕ್ಕೂ ವ್ಯಾಪಿಸಿತ್ತು. ಮಹಮ್ಮದೀಯರಲ್ಲಿ ಘಸ್ನಿ ಮತ್ತು ಘೋರಿ ವಂಶದವರು ತಮ್ಮ ಅಧಿಕಾರವನ್ನು ಉತ್ತರ ಹಿಂದೂಸ್ಥಾನದಲ್ಲಿ ಮಾತ್ರ ಹರಡಿದ್ದರು. ಅವರ ಅನಂತರ ಬಂದ ಖಿಲ್ಜಿ ವಂಶದವರು ಅಷ್ಟಕ್ಕೆ ತೃಪ್ತರಾಗಲಿಲ್ಲ. ಆ ವಂಶದಲ್ಲಿ

ಪ್ರಸಿದ್ಧನಾದ ಅಲ್ಲಾವುದ್ದೀನನು ಯಾದವರನ್ನು ಸೋಲಿಸಿ ಅವರಿಂದ ಕಪ್ಪಕಾಣಿಕೆಯನ್ನು ಕಸಿದುಕೊಂಡನು. ಇವನ ಸೇನಾನಾಯಕನಾದ ಮಲ್ಲಿಕಾಫರನು ಕ್ರಿ. ಶ. ೧೩೦೭ ರಲ್ಲಿ ದಕ್ಷಿಣಕ್ಕೆ ದಂಡೆತ್ತಿಬಂದನು. ಆಗ ದಕ್ಷಿಣದಲ್ಲಿ ಪ್ರಬಲರಾಗಿದ್ದ ಹೊಯ್ಸಳರಿಗೂ ಪಾಂಡ್ಯರಿಗೂ ಪರಸ್ಪರ ವೈಮನಸ್ಯವಿದ್ದುದರಿಂದ ಅವರು ಒಟ್ಟುಗೂಡಿ ಮಹಮ್ಮದೀಯರನ್ನು ಎದುರಿಸಲಿಲ್ಲ. ಮಲ್ಲಿಕಾಫರನೂ ಅವನ ಅನಂತರ ಮಹಮ್ಮದ್ ಬಿನ್ ತೊಗಲಕ್ಕನೂ ದಕ್ಷಿಣಕ್ಕೆ ಬಂದು ಹಿಂದೂರಾಜ್ಯಗಳನ್ನು ನಾಶಮಾಡಿ ತಮ್ಮ ಅಧಿಕಾರವನ್ನು ರಾಮೇಶ್ವರದವರೆಗೂ ಪ್ರಸರಿಸಿದರು. ಇವರ ಲೂಟಿಯ ಕಾಲದಲ್ಲಿ ಹಿಂದುಗಳ ನಾಗರಿಕತೆಗೆ ಮೂಲಭೂತವಾದ ದೇವಸ್ಥಾನಗಳೂ ಮಠಗಳೂ ನಾಶವಾದುವು. ಪ್ರಾಣಭಯದಿಂದ ಅನೇಕರು ತಮ್ಮ ಮತವನ್ನು ಬಿಟ್ಟು ಮುಸಲ್ಮಾನರಾದರು. ಹಿಂದುಗಳಿಗೆ ಮನಶ್ಶಾಂತಿಯೂ ಸುಖಜೀವನವೂ ನೆಮ್ಮದಿಯೂ ಸ್ವಪ್ನವಾದುವು. ಆ ಕಾಲದ ಸ್ಥಿತಿಯನ್ನು ವಿಜಯನಗರದ ಕಂಪರಾಯನ ಹೆಂಡತಿ ಗಂಗಾದೇವಿಯು ತನ್ನ ‘ಮಧುರಾವಿಜಯ’(ಕಂಪರಾಯಚರಿತ್ರೆ) ದಲ್ಲಿ ಹೀಗೆಂದು ಬರೆದಿದ್ದಾಳೆ—

**ಶ್ರುತಿರಸ್ತಮಿತಾ ನಯಃ ಪ್ರಲೀನೋ ವಿರತಾ ಧರ್ಮಕಥಾ ಚ್ಯುತಂ ಚರಿತ್ರಂ ।**
**ಸುಕೃತಂ ಗತಮಾಭಿಜಾತ್ಯಮಸ್ತಂ ಕಿಮಿವಾನ್ಯತ್ ಕಲಿರೇಕಏವ ಧನ್ಯಃ ॥**

ಅಲ್ಲದೇ ನಯನಾಚಾರ್ಯರಿಂದ (?) ವಿರಚಿತವಾದ ವೇದಾಂತಾಚಾರ್ಯಸ್ತೋತ್ರದಲ್ಲಿ ಆ ಕಾಲವನ್ನು ಕುರಿತು—

**ವೇದೇ ಸಂಜಾತಖೇದೇ ಮುನಿಜನವಚನೇ ಪ್ರಾಪ್ತನಿತ್ಯಾವಮಾನೇ**
**ಸಂಕೀರ್ಣೇ ಸರ್ವವರ್ಣೇ ಸತಿತದನುಗುಣೇ ನಿಷ್ಪ್ರಮಾಣೇ ಪುರಾಣೇ ॥**

ಎಂದು ಹೇಳಿದೆ. ಮಹಮ್ಮದೀಯರಿಂದ ಸುಮಾರು ೧೩೨೭ ರಲ್ಲಿ ನಡೆದ ಶ್ರೀರಂಗದ ಮುತ್ತಿಗೆಯಲ್ಲಿ ಇದು ಅಕ್ಷರಶಃ ಸತ್ಯವಾಯಿತು. ಮಹಮ್ಮದೀಯರನ್ನು ಎದುರಿಸಲು ಕಾದಿದ್ದ ಹನ್ನೆರಡು ಸಾವಿರ ಜನರಲ್ಲಿ ಅನೇಕಗು-ಪ್ರಸಿದ್ಧರಾದ ಸುದರ್ಶನಾಚಾರ್ಯರೂ ಅೞಹಿಯ ಮನವಾಳ ನಾಯನಾರ್

ಮೊದಲಾದವರೂ ಕೂಡ—ಪ್ರಾಣವನ್ನು ತೆತ್ತರು. ಶ್ರೀರಂಗನಾಥನ ವಿಗ್ರಹವು ಶ್ರೀರಂಗವನ್ನು ಬಿಟ್ಟು ದಕ್ಷಿಣ ಇಂಡಿಯದ ಅನೇಕ ಕಡೆಗಳಲ್ಲಿ ಅಲೆದು ಕೊನೆಗೆ ಗೊಪ್ಪಣದಂಡನಾಯಕನಿಂದ ಸುಮಾರು ಮೂವತ್ತೈದು ವರ್ಷಗಳನಂತರ ಶ್ರೀರಂಗದಲ್ಲಿ ಪುನಃ ಪ್ರತಿಷ್ಠೆಯಾಗುವ ಸಂಭವವೊದಗಿತು.

ಧಾರ್ಮಿಕ ಪ್ರಪಂಚದಲ್ಲಿಯೂ ಅದು ವಿವಿಧ ಮತಗಳ ಘರ್ಷಣೆಯ ಕಾಲ. ಒಂದು ಕಡೆ ಸುಮಾರು ಅಯ್ನೂರು ಶತಮಾನಗಳ ಹಿಂದೆ ಶ್ರೀಶಂಕರಾಚಾರ್ಯರಿಂದ ವಿಶೇಷ ಪ್ರಚಾರಕ್ಕೆ ಬಂದ ಅದ್ವೈತ ಮತವೂ ಇನ್ನೊಂದು ಕಡೆ ಮುನ್ನೂರು ವರ್ಷಗಳ ಹಿಂದೆ ಪ್ರಾಬಲ್ಯದ ಶಿಖರವನ್ನು ಏರಿದ್ದ ವಿಶಿಷ್ಟಾದ್ವೈತ ಮತವೂ ಅಲ್ಲಲ್ಲಿಯೇ ಮೊದಲಿನಿಂದಲೂ ತಮ್ಮ ಪ್ರಭಾವವನ್ನೂ ಬೀರುತ್ತಿದ್ದ ಸಾಂಖ್ಯ, ಯೋಗ, ವೈಶೇಷಿಕ ಪಾಶುಪತಾದಿ ವಿವಿಧ ಮತಗಳೂ ಬಹಳ ಶ್ರಮಪಟ್ಟು ಪರಸಿದ್ಧಾಂತದ ದೃಷ್ಟಿಯಿಂದ ತಮ್ಮ ಸಿದ್ಧಾಂತವು ಸರ್ವೋತ್ತಮವೆಂದು ಪ್ರಪಂಚಕ್ಕೆ ವ್ಯಕ್ತಪಡಿಸಲು ವಿಶೇಷವಾಗಿ ಪ್ರಯತ್ನಪಡುತ್ತಿದ್ದುವು.

ವಿಶಿಷ್ಟಾದ್ವೈತಿಗಳಲ್ಲಿಯೇ ಹಿಂದಿನಿಂದ ಏಕಮುಖವಾಗಿ ನಡೆದು ಬರುತ್ತಿದ್ದ ಕ್ರಮವು ತಪ್ಪಿ ಹೊಸ ಮಾರ್ಗಗಳೂ ತತ್ವಗಳೂ ರೂಪುಗೊಳ್ಳುತ್ತಿದ್ದುವು. ಶ್ರೀರಾಮಾನುಜಾಚಾರ್ಯರು ಬಹಳ ಕಷ್ಟದಿಂದ ವೈಷ್ಣವರಲ್ಲಿ ಬೆಳಸಿದ್ದ ಐಕಮತ್ಯವು ಸಡಿಲವಾಗಿ ಅವರ ಅನುಯಾಯಿಗಳಲ್ಲಿ ಭಿನ್ನಾಭಿಪ್ರಾಯಗಳೂ ದ್ವೇಷಾಸೂಯೆಗಳೂ ತಲೆದೋರುತ್ತಿದ್ದುವಲ್ಲದೆ ರಾಮಾನುಜಾಚಾರ್ಯರ ಕಾಲದಲ್ಲಿ ಏಮ್ಮುಖವಾಗಿದ್ದ ಆಚಾರ್ಯಪೀಠವು ಈ ವೇಳೆಗೆ (ಶ್ರೀರಂಗ ಮತ್ತು ಕಂಚಿ ಈ ಎರಡು ಸ್ಥಳಗಳಲ್ಲಿ) ದ್ವಿಮುಖವಾಗುವುದಕ್ಕೆ ಪ್ರಾರಂಭವಾಗಿತ್ತು. ಈ ಎರಡು ಶಾಖೆಗಳಿಗೆ ಮುಂದೆ ದಕ್ಷಿಣಶಾಖೆ ಮತ್ತು ಉತ್ತರಶಾಖೆ ಅಥವಾ (ತಮಿಳಿನಲ್ಲಿ) ತೆಂಗಲೆ ಮತ್ತು ವಡಕಲೆ ಎಂಬ ಹೆಸರು ಬಂದಿತು. ಈ ಉಭಯ ಶಾಖೆಯವರೂ ಭಾಷ್ಯ

ಮತ್ತು ಪ್ರಬಂಧಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟರೂ ಅವುಗಳಲ್ಲಿ ಯಾವುದಕ್ಕೆ ಹೆಚ್ಚು ಪ್ರಾಶಸ್ತ್ಯವೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿ ದ್ವೇಷಾಸೂಯೆಗಳು ಹೆಚ್ಚುತ್ತಿದ್ದುವು. ಈ ಸಮಯವನ್ನೇ ಕಾಯುತ್ತಿದ್ದ ವಿಮತೀಯರು ವಿಶಿಷ್ಟಾದ್ವೈತಿಗಳನ್ನು ಸೋಲಿಸಿ ಸ್ವಸಿದ್ಧಾಂತವನ್ನು ಸ್ಥಾಪಿಸಲು ಪ್ರಯತ್ನಪಡುತ್ತಿದ್ದಂತೆ ತೋರುತ್ತದೆ. ಇಂತಹ ಸನ್ನಿವೇಶದಲ್ಲಿ ವೇಂಕಟನಾಥರು ಉದಯಿಸಿ ಸಿದ್ಧಾಂತಸ್ಥಾಪನೆಯನ್ನು ಮಾಡಿದುದರಿಂದಲೇ ಅವರಿಗೆ ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಬಹು ಉನ್ನತವಾದ ಸ್ಥಾನವು ದೊರೆತಿದೆ.

**ವೇಂಕಟನಾಥರ ಪೂರ್ವಾಚಾರ್ಯರು:**—ಶ್ರೀರಾಮಾನುಜಾಚಾರ್ಯರು ನೂರಿಪ್ಪತ್ತು ವರ್ಷಗಳಕಾಲ ಜೀವಿಸಿದ್ದು ಕ್ರಿ. ಶ. ೧೧೩೭ರಲ್ಲಿ ಪರಮಪದವನ್ನೈದಿದರು. ಅವರು ತಮ್ಮ ಚರಮಾವಸ್ಥೆಯಲ್ಲಿ ತಾವು ಗೊತ್ತುಮಾಡಿದ ಎಪ್ಪತ್ತುನಾಲ್ಕು ಸಿಂಹಾಸನಾಧಿಪತಿಗಳಲ್ಲಿ ತಿರಕ್ಕುರುಹೈಪ್ಪಿರಾನ್‌ಪಿಳ್ಳಾನ್ ಎಂಬುವರನ್ನು ತಮ್ಮ ಕಾಲಾನಂತರ ಉಭಯ-(ಭಾಷ್ಯ ಮತ್ತು ಪ್ರಬಂಧ) ಸಿಂಹಾಸನಾಧಿಪತಿಗಳನ್ನಾಗಿಯೂ ಕಂಡಾಂಬಿಆಚ್ಚಾನ್, ನಡಾದೂರ್ ಆಳ್ವಾನ್ ಮತ್ತು ಮುದಲೈಯಾಂಡಾನ್ ಎಂಬ ಮೂವರನ್ನೂ ಭಾಷ್ಯಸಿಂಹಾಸನಾಧಿಪತಿಗಳನ್ನಾಗಿಯೂ ನೇಮಿಸಿದರು. ಇವರಲ್ಲಿ ಕಡಾಂಬಿಆಚ್ಚಾನ್ ಅವರು ಉಭಯಸಿಂಹಾಸನಾಧಿಪತಿಗಳಾಗಿರದಿದ್ದರೂ ಶ್ರೀ ರಾಮಾನುಜಾಚಾರ್ಯರಿಂದ ಸಾಕ್ಷಾತ್ತಾಗಿ ಮಂತ್ರ ಮತ್ತು ರಹಸ್ಯಾರ್ಥಗಳನ್ನು ಪಿಳ್ಳಾನ್ ಅವರಂತೆಯೇ ಅಧಿಕರಿಸಿದ್ದರಿಂದ ಇವರಿಗೆ ಇತರ ಭಾಷ್ಯಾಧಿಕಾರಿಗಳಿಗಿಂತ ಹೆಚ್ಚಿನ ಗೌರವವು ಸಲ್ಲುತ್ತಿತ್ತು. ಪಿಳ್ಳಾನ್ ಅವರು ತಮ್ಮ ಆಚಾರ್ಯತ್ವದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ವಿಶೇಷವಾಗಿ ಪ್ರಚಾರಪಡಿಸಿದ್ದಲ್ಲದೆ ಶ್ರೀ ರಾಮಾನುಜಾಚಾರ್ಯರ ವಿಗ್ರಹವನ್ನು ಎಲ್ಲ ವೈಷ್ಣವಾಲಯಗಳಲ್ಲಿಯೂ ಆರಾಧ್ಯ ವಿಗ್ರಹವನ್ನಾಗಿ ಪ್ರತಿಷ್ಠಿಸಿದರು. ಇವರ ಕಾಲಾನಂತರ ಇವರ ಶಿಷ್ಯರಾದ

ವಿಷ್ಣುಚಿತ್ರನ್ ಅಥವಾ ಎಂಗಳಾಳ್ವಾನ್ ಎಂಬುವರು ಆಚಾರ್ಯಪೀಠ
ವನ್ನಲಂಕರಿಸಿದರು. ಅವರ ತರುವಾಯ ರಾಮಾನುಜಾಚಾರ್ಯರ
ಸೋದರಳಿಯಂದಿರೂ ಭಾಷ್ಯಸಿಂಹಾಸನಾಧಿಪತಿಗಳೂ ಆಗಿದ್ದ ನಡಾ
ದೂರ್ಆಳ್ವಾನ್ ಅವರ ಮೊಮ್ಮಕ್ಕಳಾದ ನಡಾದೂರ್ ಅಮ್ಮಾಳ್
ಅಥವಾ ವರದಾಚಾರ್ಯರು ಅವರ ಉತ್ತರಾಧಿಕಾರಿಗಳಾದರು. ವರದಾ
ಚಾರ್ಯರ ತಂದೆಗಳಾದ ವರದರಾಜಪೆರುಮಾಳ್ ಅವರು ತಾವು ಸ್ವತಃ
ಭಾಷ್ಯಾಧಿಕಾರಿಗಳಾಗಿದ್ದರೂ ತಾವು ತಮ್ಮ ಮಕ್ಕಳಿಗೆ ಮಂತ್ರಾರ್ಥಗಳನ್ನು
ಮಾತ್ರ ಉಪದೇಶಮಾಡಿ ಶ್ರೀಭಾಷ್ಯಕಾಲಕ್ಷೇಪವನ್ನು ಶ್ರೀರಂಗದಲ್ಲಿ
ಉಭಯಸಿಂಹಾಸನಾಧಿಪತಿಗಳಾಗಿದ್ದ ವಿಷ್ಣುಚಿತ್ತರಲ್ಲಿಯೇ ಏರ್ಪಡಿಸಿ
ದರು. ವಿಷ್ಣುಚಿತ್ತರು ವರದಾಚಾರ್ಯರನ್ನು ತಮ್ಮ ಶಿಷ್ಯರನ್ನಾಗಿ ಮಾಡಿ
ಕೊಳ್ಳುವಾಗಲೇ ಅವರು ತಮ್ಮ ಶಿಷ್ಯರಲ್ಲದೆ ಮಕ್ಕಳಾಗಿಯೂ ಇರಬೇ
ಕೆಂದು ವಾಗ್ದಾನವನ್ನು ತೆಗೆದುಕೊಂಡರು. ಆದ್ದರಿಂದ ವಿಷ್ಣುಚಿತ್ತರ
ತರುವಾಯ ವರದಾಚಾರ್ಯರು ಆಚಾರ್ಯಪೀಠವನ್ನಲಂಕರಿಸಿದಾಗ ಅವರಲ್ಲಿ
ಉಭಯ ಸಿಂಹಾಸನಾಧಿಪತ್ಯವೂ ಭಾಷ್ಯಾಧಿಪತ್ಯವೂ ಒಂದಾದುವು. ಮೂರ
ನೆಯ ಭಾಷ್ಯಾಧಿಪತಿಗಳಾಗಿದ್ದ ಕಡಾಂಬಿಆಚ್ಚಾನ್ ಅವರು ಪಿಳ್ಳಾನ್
ಅವರ ಕಾಲದಲ್ಲಿಯೇ ಸ್ವತಂತ್ರವಾಗಿ ಭಾಷ್ಯೋಪದೇಶವನ್ನು ಮಾಡುತ್ತಿ
ದ್ದರು. ಅವರ ಅನಂತರ ಅವರ ಮಕ್ಕಳೂ ಮೊಮ್ಮಕ್ಕಳೂ ಆದ ರಾಮಾ
ನುಜಪಿಳ್ಳಾನ್ ಮತ್ತು ಶ್ರೀರಂಗರಾಜರು ಕ್ರಮವಾಗಿ ಆ ಪರಂಪರೆಯಲ್ಲಿ
ಆಚಾರ್ಯರಾಗಿದ್ದರು. ಶ್ರೀರಂಗರಾಜರಿಗೆ ರಾಮಾನುಜ ಅಥವಾ ಅಪ್ಪಿ
ಳ್ಳಾರ್ ಎಂಬ ಕುಮಾರರೂ ತೋತಾರಮ್ಮನೆಂಬ ಕುಮಾರಿಯೂ ಹುಟ್ಟಿ
ದರು. (ಈ ಕುಮಾರಿಯೇ ಮುಂದೆ ವೇಂಕಟನಾಥರ ತಾಯಿಯಾಗುವಳು)
ರಾಮಾನುಜರು ಅದ್ವಿತೀಯ ಪಂಡಿತರಾಗಿ ಮಂತ್ರಾರ್ಥಕಾಲಕ್ಷೇಪಗಳನ್ನು
ಮುಗಿಸಿ ಭಾಷ್ಯಕಾಲಕ್ಷೇಪವನ್ನು ಪ್ರಾರಂಭಿಸುವುದರೊಳಗಾಗಿ ಅವರ ತಂದೆ
ಯವರು ಕಾಲಾಧೀನರಾದುದರಿಂದ ರಾಮಾನುಜರು ನಡಾದೂರ್

ಅಮ್ಮಾಳ್ ಅಥವಾ ವರದಾಚಾರ್ಯರಲ್ಲಿ ಶಿಷ್ಯರಾಗಿ ಅವರ ಉತ್ತರಾಧಿಕಾರಿಗಳಾದರು. ಆದುದರಿಂದ ಇವರ ಕಾಲದಲ್ಲಿ ಹಿಂದಿನಿಂದಲೂ ಮೂರು ಬೇರೆ ಬೇರೆ ಶಾಖೆಯಾಗಿದ್ದ ಭಾಷ್ಯ ಮತ್ತು ಉಭಯ ಸಿಂಹಾಸನಾಧಿಪತ್ಯವು ಒಂದಾದುವು. ಇವರೇ ವೇಂಕಟನಾಥಾಚಾರ್ಯರ ಸಾಕ್ಷಾತ್ ಗುರುಗಳು. ಹೀಗೆ ಒಟ್ಟಾದ ಆಚಾರ್ಯಪರಂಪರೆಯನ್ನು ಈ ರೀತಿ ಚಿತ್ರಿಸಬಹುದು.






* ಇವರಿಗೆ ಆತ್ರೇಯ ರಾಮಾನುಜಾಚಾರ್ಯರೆಂಬುದು ಪ್ರಸಿದ್ಧವಾದ ಹೆಸರು.

# ಆಚಾರ್ಯರ ಜನನ ಮತ್ತು ಬಾಲ್ಯ.

---

ವೇಂಕಟನಾಥಾಚಾರ್ಯರು ಚರಿತ್ರಪ್ರಸಿದ್ಧವಾದ ಕಾಂಚೀಪುರದ ತೂಪ್ಪಿಲ್ ಎಂಬ ಅಗ್ರಹಾರದಲ್ಲಿ ಅವತರಿಸಿದರು. ರಾಮಾನುಜಾಚಾರ್ಯರಿಂದ ಸ್ಥಾಪಿತವಾದ ಎಪ್ಪತ್ತುನಾಲ್ಕು ಸಿಂಹಾಸನಾಧಿಪತಿಗಳಲ್ಲಿ ಒಬ್ಬರ ವಂಶಸ್ಥರಾದ ಅನಂತಸೂರಿಸೋಮಯಾಜಿ ಎಂಬುವರೇ ಇವರ ತಂದೆಗಳು. ನಡಾದೂರ್ ವರದಚಾರ್ಯರ ಶಿಷ್ಯರೂ ಉಭಯಸಿಂಹಾಸನಾಧಿಪತಿಗಳೂ ಆದ ಆತ್ರೇಯರಾಮಾನುಜರ ಸಹೋದರಿಯರಾದ ತೋತಾರಮ್ಮನವರು ಇವರ ತಾಯಿಯವರು. ಆಚಾರ್ಯರ ಜನನದ ವಿಷಯದಲ್ಲಿ ಒಂದು ಐತಿಹ್ಯವುಂಟು. ಅನಂತಸೂರಿಗಳಿಗೆ ಬಹಳಕಾಲ ಸಂತಾನವಿರಲಿಲ್ಲ. ಒಂದುದಿನ ತೋತಾರಮ್ಮನವರ ಸ್ವಪ್ನದಲ್ಲಿ ತಿರುಪತಿಯ ವೇಂಕಟನಾಥಸ್ವಾಮಿಯೂ ಅಮ್ಮನವರೂ ಬೇರೆಬೇರೆಯಾಗಿ ಕಾಣಿಸಿಕೊಂಡು ಅವರು ತಿರುಪತಿಯಾತ್ರೆಯನ್ನು ಮಾಡಿದರೆ ಅವರಿಗೆ ಸಂತಾನವಾಗುವುದೆಂದು ವಾಗ್ದಾನಮಾಡಿದರಂತೆ. ಅದೇಪ್ರಕಾರ ಆ ದಂಪತಿಗಳು ತತ್ಕ್ಷಣವೇ ಬಹಳ ಭಕ್ತಿಯಿಂದ ತಿರುಪತಿಕ್ಷೇತ್ರಕ್ಕೆ ಪ್ರಯಾಣಮಾಡಿದರು. ತಿರುಪತಿಯಲ್ಲಿರುವಾಗ ಶ್ರೀನಿವಾಸದೇವರು ಪುನಃ ತೋತಾರಮ್ಮನವರ ಸ್ವಪ್ನದಲ್ಲಿ ಒಬ್ಬ ಬಾಲಕನ ರೂಪದಲ್ಲಿ ಕಾಣಿಸಿಕೊಂಡು ಒಂದು ಘಂಟೆಯನ್ನು ಅವರಿಗೆ ಕೊಟ್ಟು ಅದನ್ನು ನುಂಗುವುದರಿಂದ ಆಕೆಗೆ ಸತ್ಪುತ್ರನು ಜನಿಯಿಸುವನೆಂದು ತಿಳಿಸಿ ಅಂತರ್ಧಾನವಾದರಂತೆ. ಮರುದಿವಸ ಶ್ರೀನಿವಾಸಸ್ವಾಮಿಯ ದೇವಸ್ಥಾನದಲ್ಲಿ ಇದ್ದ ಘಂಟೆಯು ಮಾಯವಾಯಿತು. ಆಗ ದೇವಸ್ಥಾನದ ಅಧಿಕಾರಿಗಳು ಅಲ್ಲಿಯ ನೌಕರರ ಮೇಲೆ ತಪ್ಪನ್ನು ಹೊರಿಸಬೇಕೆಂದು ಯೋಚಿಸುತ್ತಿದ್ದ ಕಾಲದಲ್ಲಿ ದೇವರು ಅರ್ಚಕಮುಖೇನ ಘಂಟೆಯು ತನ್ನ ಇಷ್ಟದಿಂದಲೇ ಮಾಯವಾಗಿದೆಯೆಂಬ ವಿಷಯವನ್ನು ತಿಳಿಯಪಡಿಸಿದರಂತೆ. ಅದನ್ನೂ ಅನಂತಸೋಮಯಾಜಿಗಳ

ಸ್ವಪ್ನವೃತ್ತಾಂತವನ್ನೂ ಕೇಳಿದ ಅಲ್ಲಿಯ ನಿವಾಸಿಗಳಿಗೆ ಸೋಮಯಾಜಿಗಳಲ್ಲಿ ವಿಶೇಷ ಪೂಜ್ಯತೆಯುಂಟಾಗಿ ಅವರನ್ನು ಗೌರವಿಸಿದರು. ಈಗಲೂ ತಿರುಪತಿಯಲ್ಲಿ ಘಂಟೆಯಿಲ್ಲದೆಯೇ ಪೂಜಾದಿಗಳು ನಡೆಯುತ್ತಿರುವುದು ಈ ಐತಿಹ್ಯವನ್ನು ದೃಢೀಕರಿಸುತ್ತದೆ. ಆದುದರಿಂದಲೇ ವೇಂಕಟನಾಥರು ಶ್ರೀವಿಷ್ಣುಘಂಟಾವತಾರರೆಂದು ಪ್ರಸಿದ್ಧರಾಗಿದ್ದಾರೆ. ಈ ವಿಷಯವನ್ನು ಆಚಾರ್ಯರೇ ತಮ್ಮ "ಸಂಕಲ್ಪಸೂರ್ಯೋದಯ"ದಲ್ಲಿ ಹೀಗೆ ಹೇಳಿದ್ದಾರೆ—

> ವಿತ್ರಾಸಿನೀ ವಿಬುಧವೈರಿವರೂಥಿನೀನಾಂ
> ಪದ್ಮಾಸನೇನ ಪರಿಚಾರವಿಧೌ ಪ್ರಯುಕ್ತಾ ।
> ಉತ್ಪ್ರೇಕ್ಷ್ಯತೇ ಬುಧಜನೈರುಪಪತ್ತಿಭೂಮ್ನಾ
> ಘಂಟಾ ಹರೇಸ್ಸಮಜನಿಷ್ಟ ಯದಾತ್ಮನೇತಿ ॥[1]

(ಎಂದರೆ, ಅಸುರರನ್ನು ಭಯಪಡಿಸತಕ್ಕ, ದೇವರ ಸೇವೆಯಲ್ಲಿ ಸದಾ ಉಪಯೋಗಿಸಲ್ಪಟ್ಟ ಘಂಟೆಯೇ ಇವರಾಗಿ ಅವತರಿಸಿದರೆಂದು ಪಂಡಿತರು ಉತ್ಪ್ರೇಕ್ಷಿಸುತ್ತಾರೆ.) ನಾಸ್ತಿಕಮತಗಳನ್ನು ತಮ್ಮ ವಿದ್ಯೆ ಮತ್ತು ಪ್ರಭಾವಗಳಿಂದ ಭಯಪಡಿಸಿ ಸದಾ ದೇವರ ಸೇವೆಯಲ್ಲಿದ್ದುದರಿಂದ ಈ ರೀತಿ ಉತ್ಪ್ರೇಕ್ಷಿಸಿರಬಹುದು.

ಇದಾದ ಹನ್ನೆರಡು ವರುಷಗಳಮೇಲೆ ತೋತಾರಮ್ಮನವರು ಕಲಿಯುಗದ ೪೩೭೧ ಶಾ॥ ಶ॥ ೧೧೯೧ನೆಯ ವರ್ಷಗಳಿಗೆ ಸರಿಯಾದ ವಿಭವ[2] ಸಂವತ್ಸರದ (ಕನ್ಯಾ) ಭಾದ್ರಪದ ಶು॥ ನವಮಿ ಬುಧವಾರ

---

1 ಸಂಕಲ್ಪಸೂರ್ಯೋದಯ ಮೊದಲನೆಯ ಅಂಕ, ಶ್ಲೋಕ 14.

2 ವೇಂಕಟನಾಥರು ಯಾವ ವರ್ಷದಲ್ಲಿ ಜನಿಸಿದರೆಂಬ ವಿಷಯವು ಚರ್ಚಾಸ್ಪದವಾಗಿದೆ. 'ಗುರುಪರಂಪರಾಪ್ರಭಾವ'ದಲ್ಲಿ "ಶ್ರೀಧೀಯೋಗ್ಯೇಶಕೇ ಶುಕ್ಲೇ ಉದಭೂದ್ವೇಂಕಟೇಶ್ವರಃ" ಎಂಬ ವಾಕ್ಯವನ್ನು ಹೇಳಿ ಆಚಾರ್ಯರ ಜನನವು ಶುಕ್ಲ ಸಂವತ್ಸರದಲ್ಲೆಂದು ಉಕ್ತವಾಗಿದೆ. ಮಹಾಚಾರ್ಯರಿಂದ ಮಣಿಪ್ರವಾಳದಲ್ಲಿ ರಚಿತವಾದುದೂ ಅವರ ಶಿಷ್ಯರಾದ ಶ್ರೀನಿವಾಸಸೂರಿಗಳ ವ್ಯಾಖ್ಯಾನವನ್ನುಳ್ಳುದೂ ಆದ 'ವೈಭವ

ಶ್ರವಣನಕ್ಷತ್ರದ ದಿನ ಸಕಲ ಸಲ್ಲಕ್ಷಣಗಳಿಂದ ಕೂಡಿದ ಪುತ್ರನನ್ನು ಪಡೆದರು.

ಹೀಗೆ ಬಹಳ ದಿನಗಳ ಮೇಲೆ ಶ್ರೀನಿವಾಸದೇವರ ಅನುಗ್ರಹದಿಂದ ಉತ್ಪನ್ನವಾದ ಶಿಶುವಿಗೆ ಅನಂತಸೋಮಯಾಜಿಗಳು ಅವರ ಹೆಸರೇ ಆದ ವೇಂಕಟನಾಥನೆಂಬ ಹೆಸರನ್ನು ಇಟ್ಟು ಬಹಳ ಪ್ರೀತಿಯಿಂದ ಸಾಕುತ್ತಿದ್ದರು. ಮೂರು ವರ್ಷವಾಗುತ್ತಲೇ ವೇಂಕಟನಾಥರನ್ನು ಅವರ ಸೋದರಮಾವಂದಿರಾದ ಆತ್ರೇಯರಾಮಾನುಜರು ತಮ್ಮಲ್ಲಿಗೆ ಕರಸಿ

---

ಪ್ರಕಾಶಿಕೆ'ಯಲ್ಲಿ ಆಚಾರ್ಯರ ಜನನವು ವಿಭವ ಸಂವತ್ಸರವೆಂದು ಹೇಳಿದೆ. ಆಚಾರ್ಯರ ವಿಷಯಕವಾದ 'ಆಚಾರ್ಯದಶಕ' 'ಆಚಾರ್ಯದ್ವಾವಿಂಶತಿ' 'ಆಚಾರ್ಯದ್ವಾತ್ರಿಂಶತಿ' 'ಆಚಾರ್ಯಶತಕ' ಮೊದಲಾದುವುಗಳಲ್ಲಿಯೂ ವಿಭವಸಂವತ್ಸರದಲ್ಲಿಯೇ ಎಂದು ಉಲ್ಲೇಖವಿದೆ. ಆಚಾರ್ಯರ ಅಷ್ಟೋತ್ತರಶತನಾಮಾವಳಿಯಲ್ಲಿ 'ವಿಭವಾಬ್ದಸಮುತ್ಪನ್ನ' ಎಂಬ ವಾಕ್ಯವಿದೆ. ಇದೇ ವಿಷಯವು ಈಚೆಗೆ ಚರ್ಚೆಗೆ ಬಂದು ವೈದಿಕರಿಂದ ವಿಭವ ಸಂವತ್ಸರವೇ ಆಚಾರ್ಯರ ಅವತಾರವರ್ಷವೆಂದು ತೀರ್ಮಾನವಾಗಿದೆ. ಆದರೆ ಈ ವಿಭವ ಶುಕ್ಲ ವರ್ಷಗಳೆರಡರಲ್ಲಿಯೂ ಮೇಲೆ ಹೇಳಿರುವ ತಿಥಿ ವಾರ ನಕ್ಷತ್ರಗಳು ಕೂಡಿ ಸಮಂಜಸವಾಗಿ ಬರುವುದಿಲ್ಲ. ಡಾ|| ಸ್ವಾಮಿಕಣ್ಣುಪಿಳ್ಳೆಯವರ ಪಂಚಾಂಗದ ಪ್ರಕಾರ ವಿಭವ ಸಂವತ್ಸರವು ಕಲಿಯುಗದ ೪೩೬೯ನೆಯ ಸಂವತ್ಸರವೂ ಶಾ|| ಶ ೧೧೮೯ನೆಯ ವರ್ಷವೂ ಆಗುವುದೇ ವಿನಾ ಕಲಿಯುಗದ ೪೩೭೧ ಮತ್ತು ಶಾ|| ಶ ೧೧೯೧ನೆಯ ವರ್ಷಗಳಾಗುವುದಿಲ್ಲ. ಈ ಕಲಿಯುಗ ಮತ್ತು ಶಾಲಿವಾಹನ ಶಕ ವರ್ಷಸಂಖ್ಯೆಗಳೂ ಕನ್ಯಾ ಭಾದ್ರಪದ ಶುಕ್ಲ ದಶಮೀ ಬುಧವಾರ ಶ್ರವಣ ನಕ್ಷತ್ರ ಇವೆಲ್ಲವೂ ಒಂದು ದಿವಸದಲ್ಲಿ ಬರುವುದು ಪ್ರಮೋದೂತ ವರ್ಷದಲ್ಲಿ. ಆಚಾರ್ಯರು ಸೌಮ್ಯವರ್ಷದಲ್ಲಿ ಪರಂಧಾಮವನ್ನೈದಿದರೆಂಬುದು ಎಲ್ಲರಿಂದಲೂ ಅಂಗೀಕೃತವಾಗಿದೆ. ಆವಿರ್ಭಾವವು ವಿಭವವರ್ಷವಾದರೆ ಸೌಮ್ಯವರ್ಷಕ್ಕೆ ಒಂದುನೂರೆರಡು ವರ್ಷಗಳಾಗುತ್ತವೆ. ನಯನಾಚಾರ್ಯರ ಶಿಷ್ಯರಾದ ವೇಂಕಟೇಶಾಚಾರ್ಯರೆಂಬುವರು ರಚಿಸಿರುವ ದೇಶಿಕಗದ್ಯದಲ್ಲಿ "ಜೀವಿತಶತಸಂವತ್ಸರ" ಎಂಬ ವಾಕ್ಯವಿರುವುದು. ಈ ವಾಕ್ಯಕ್ಕೆ ನಿರ್ದಿಷ್ಟವಾದ ನೂರು ವರ್ಷ ಮಾತ್ರವೆಂದು ಅರ್ಥಮಾಡುವುದಾದರೆ ಪ್ರಮೋದೂತ ವರ್ಷದಿಂದ ಸೌಮ್ಯವರ್ಷಕ್ಕೆ ಸರಿಯಾಗಿ ನೂರು ವರ್ಷಗಳಾಗುವುವು. ಆದುದರಿಂದ ಆಚಾರ್ಯರ ಜನನವು ಪ್ರಮೋದೂತ ವರ್ಷದಲ್ಲಿರಬಹುದೆ ?

ಕೊಂಡರು. ಅವರ ಪೋಷಣೆಯಲ್ಲಿಯೂ ಪಂಡಿತರ ಮಧ್ಯದಲ್ಲಿಯೂ ಬೆಳೆಯುತ್ತಿದ್ದ ವೇಂಕಟನಾಥರಿಗೆ ವಿದ್ಯೆಯಲ್ಲಿ ಅತಿಶಯವಾದ ಪ್ರೀತಿಯು ಹುಟ್ಟಿತು. ಎಂಟುವರ್ಷಕ್ಕೆ ಅವರಿಗೆ ಉಪನಯನವಾಗಿ ವಿದ್ಯಾಭ್ಯಾಸವು ಪ್ರಾರಂಭವಾಯಿತು. ಆಟವಾಡಿಕೊಂಡು ಸುಖವಾಗಿ ಕಾಲಕಳೆಯುವುದಕ್ಕೆ ಯೋಗ್ಯವಾದ ಆ ವಯಸ್ಸಿನಲ್ಲಿಯೇ ಅವರಿಗೆ ಭಗವಂತನ ಉಪಾಸನೆಯಲ್ಲಿಯೂ ಜಟಿಲವಾದ ವೇದಾಂತವಿಷಯಗಳ ವಿಮರ್ಶೆಯಲ್ಲಿಯೂ ಮನಸ್ಸು ನಾಟಿತು.

ವೇಂಕಟನಾಥರ ಪ್ರತಿಭೆಯೂ, ಬುದ್ಧಿಕೌಶಲವೂ ಚಿಕ್ಕವಯಸ್ಸಿನಿಂದಲೂ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದುವು. ಯಾವ ವಿಷಯವನ್ನಾಗಲಿ ಅವರಿಗೆ ಒಂದುಸಲಕ್ಕಿಂತ ಹೆಚ್ಚಾಗಿ ಹೇಳಬೇಕಾಗಿರಲಿಲ್ಲ. ಅವರಿಗೆ ಐದು ವರುಷ ವಯಸ್ಸಾಗಿದ್ದಾಗ ಒಂದುದಿನ ಆತ್ರೇಯ ರಾಮಾನುಜರು ಅವರನ್ನು ತಮ್ಮ ಗುರುಗಳಾದ ನಡಾದೂರ್ ವರದಾಚಾರ್ಯರ ದರ್ಶನಕ್ಕೆ ಕರೆದುಕೊಂಡುಹೋದರು. ಆಗ ವರದಾಚಾರ್ಯರು ತಮ್ಮ ಶಿಷ್ಯರುಗಳಾದ ಶ್ರುತಪ್ರಕಾಶಿಕಾಚಾರ್ಯರಾದ ಸುದರ್ಶನಾಚಾರ್ಯರು, ವಡಕ್ಕುತಿರುವೀಧಿಪಿಳ್ಳೈ ಮೊದಲಾದವರಿಗೆ ಭಾಷ್ಯೋಪದೇಶವನ್ನು ಮಾಡುತ್ತಿದ್ದರು. ಆತ್ರೇಯರಾಮಾನುಜರು ಪ್ರವೇಶಿಸಿದ ತತ್‍ಕ್ಷಣವೇ ವರದಾಚಾರ್ಯರು ಅವರೊಡನಿದ್ದ ಬಾಲಕನ ತೇಜಸ್ಸನ್ನೂ ಲಕ್ಷಣಗಳನ್ನೂ ನೋಡಿ ಆಶ್ಚರ್ಯಪಟ್ಟು ಆತನ ವಿಷಯವಾಗಿ ಪ್ರಶ್ನೆಮಾಡಿ ಅವನು ಯಾರೆಂಬುದನ್ನು ತಿಳಿದುಕೊಂಡು ತಾವು ಹಿಂದೆ ನಿಲ್ಲಿಸಿದ್ದ ಉಪನ್ಯಾಸವನ್ನು ಮುಂದುವರಿಸಲು ಹೊರಟರು. ಆದರೆ ಹಿಂದೆ ಎಲ್ಲಿ ನಿಲ್ಲಿಸಿದ್ದರೆಂಬ ವಿಷಯವು ಎಲ್ಲರಿಗೂ ಮರೆತುಹೋಗಿತ್ತು. ಆ ಸಮಯದಲ್ಲಿ ಅಲ್ಲಿದ್ದ ಬಾಲಕನು ‘ ಈ ವಿಷಯವು ಚರ್ಚೆಯಾಗುತ್ತಿದ್ದಾಗ ಉಪನ್ಯಾಸವು ನಿಂತಿತೆಂದು ’ ಹೇಳಲು ಎಲ್ಲರಿಗೂ ಅವನ ಬುದ್ಧಿಸಾಮರ್ಥ್ಯವನ್ನು ನೋಡಿ ಆಶ್ಚರ್ಯವುಂಟಾಯಿತು. ಆಗ ಗುರುಗಳಾದ ವರದಾಚಾರ್ಯರೇ ಬಹಳ

ಸಂತೋಷದಿಂದ ಈ ಕೆಳಗಿನ ಶ್ಲೋಕಾರ್ಥ ಬರುವಂತೆ ಆಶೀರ್ವಾದ ಮಾಡಿದರು—

**ಪ್ರತಿಷ್ಠಾಪಿತವೇದಾನ್ತಃ ಪ್ರತಿಕ್ಷಿಪ್ತಬಹಿರ್ಮತಃ ।**
**ಭೂಯಾಸ್ತ್ರೈವಿದ್ಯಮಾನ್ಯಸ್ತ್ವಂ ಭೂರಿಕಲ್ಯಾಣಭಾಜನಮ್ ।**

ವೇದಾಂತಮತವನ್ನು ದೃಢವಾಗಿ ಸ್ಥಾಪಿಸಿ ಅದಕ್ಕೆ ವಿರೋಧವಾದ ಮತಗಳನ್ನು ಖಂಡಿಸಿ ಪಂಡಿತರಿಂದ ಸನ್ಮಾನಿತನಾಗಿ ಬಹಳ ಮಂಗಳಕ್ಕೆ ಪಾತ್ರನಾಗುವೆ ಎಂಬ ಆಶೀರ್ವಾದರೂಪವಾದ ಭವಿಷ್ಯವನ್ನು ನುಡಿದರು. ಅಲ್ಲದೆ ಬಹಳ ವೃದ್ಧರಾದುದರಿಂದ ಸಕಲಶಾಸ್ತ್ರಗಳನ್ನು ಇವರಿಗೆ ತಾವೇ ಪಾಠಹೇಳಲು ಆಗದುದಕ್ಕಾಗಿ ದುಃಖಪಟ್ಟು ತಮ್ಮ ಶಿಷ್ಯರೂ ವೇಂಕಟನಾಥರ ಸೋದರಮಾವಂದಿರೂ ಆದ ಆತ್ರೇಯರಾಮಾನುಜಾಚಾರ್ಯರಿಗೇ ಆ ಭಾರವನ್ನು ವಹಿಸಿದರು. ಆತ್ರೇಯರಾಮಾನುಜರು ವರದಾಚಾರ್ಯರ ಅಪ್ಪಣೆಯಂತೆ ತಮ್ಮ ಅಳಿಯನಿಗೆ ಸಕಲ ಶಾಸ್ತ್ರಾಭ್ಯಾಸಮಾಡಿಸಿ ಮುಂದೆ ಅವರು ವಹಿಸಬೇಕಾದ ಆಚಾರ್ಯಪೀಠಕ್ಕೆ ಯೋಗ್ಯರನ್ನಾಗಿ ಮಾಡಿದರು.

ನಡಾದೂರ್ ವರದಾಚಾರ್ಯರು ಕ್ರಿ.ಶ. ೧೨೭೮ ರಲ್ಲಿ ಸ್ವರ್ಗಸ್ಥರಾಗಲು ಆತ್ರೇಯರಾಮಾನುಜರೇ ಅವರ ಅನಂತರ ಆಚಾರ್ಯತ್ವವನ್ನು ವಹಿಸಬೇಕಾಯಿತು. ಇವರಿಗೆ ತಮ್ಮ ಕುಲದೇವತೆಯಾದ ವರದರಾಜಸ್ವಾಮಿಯನ್ನು ಅಗಲಲು ಮನಸ್ಸು ಬರಲಿಲ್ಲವಾಗಿ ಆಚಾರ್ಯಪೀಠವನ್ನಲಂಕರಿಸಿದಮೇಲೆಯೂ ಶ್ರೀರಂಗಕ್ಕೆ ತೆರಳದೆ ಅಲ್ಲಿಯ ಕಾರ್ಯಗಳನ್ನು ತಮ್ಮ ಸ್ನೇಹಿತರಾದ ಸುದರ್ಶನಾಚಾರ್ಯರಿಗೆ ವಹಿಸಿ ತಾವು ಕಾಂಚೀಪುರದಲ್ಲಿಯೇ ನಿಂತರು. ವೇಂಕಟನಾಥರು ಕಂಚಿಯಲ್ಲಿಯೇ ಇದ್ದ ಆತ್ರೇಯರಾಮಾನುಜರಲ್ಲಿ ಭಾಷ್ಯಾದಿಸಂಪ್ರದಾಯಗ್ರಂಥಗಳೆಲ್ಲವನ್ನೂ ಕಾಲಕ್ಷೇಪಮಾಡಿ ಪಾರಂಗತರಾದರು. ವೇಂಕಟನಾಥರಿಗೆ ಪಾಠಹೇಳುವುದೆಂದರೆ ಆತ್ರೇಯರಾಮಾನುಜರಿಗೆ ದೊಡ್ಡ ಸಂತೋಷ. ಅವರ ದಯಾಪೂರಿತವಾದ ಆಚಾರ್ಯತ್ವದಲ್ಲಿ ವೇಂಕಟನಾಥರು ತಮ್ಮ ಇಪ್ಪತ್ತನೆಯ ವಯಸ್ಸಿನೊಳಗಾಗಿ

ವೇದ, ವೇದಾಂತ, ತರ್ಕ, ವ್ಯಾಕರಣ, ಮೀಮಾಂಸ ಮೊದಲಾದ ಸಕಲ ಶಾಸ್ತ್ರಗಳಲ್ಲಿಯೂ ಪ್ರವೀಣರಾದರು. ಇವರ ವೈದುಷ್ಯವನ್ನು ಕುರಿತು ಪ್ರತಿವಾದಿ ಭಯಂಕರಂ ಅಣ್ಣನ್ ಅವರು ತಾವು ವೇಂಕಟನಾಥರ ವಿಷಯ ವಾಗಿ ರಚಿಸಿರುವ 'ಸಪ್ತತಿರತ್ನಮಾಲಿಕೆ'ಯಲ್ಲಿ ಈ ರೀತಿ ಹೇಳಿರುವರು—[3]

ಜಟಾವರ್ಣಚರ್ಯಾದ್ಯನೇಕಪ್ರಕಾರ
ತ್ರಯೀಲಕ್ಷಣೋಚ್ಚಾರಣೇ ವ್ಯಾಸಕಲ್ಪಃ ।
ತಥಾ ಕಲ್ಪಸೂತ್ರಪ್ರಯೋಗಾದ್ಯಭಿಜ್ಞೋ
ಜಯತ್ಯನ್ವಹಂ ಸರ್ವತನ್ತ್ರಸ್ವತನ್ತ್ರಃ ॥

ಭರದ್ವಾಜಶಾಣ್ಡಿಲ್ಯಹಾರೀತಮುಖ್ಯ
ಸ್ಮೃತಿಸ್ತೋಮಸೂಕ್ತ್ಯರ್ಥನಿರ್ಣೀತಿದಕ್ಷಃ ।
ಪುರಾಣಾಗಮಾದಿಷ್ವಸಾಧಾರಣಶ್ರೀಃ
ಸುತೋ ಭಾತಿಲೋಕೇಷ್ವನೇನಾರ್ಯಸೂರೀಃ ॥

ಜ್ಯೋತಿಶ್ಛನ್ದಶ್ಶಬ್ದಶಾಸ್ತ್ರಪ್ರವೀಣಃ
ಕಾವ್ಯಶ್ರೇಣೀನಾಟಕಾಲಂಕೃತಜ್ಞಃ ।
ಮೀಮಾಂಸಾಯಾಂ ಬ್ರಹ್ಮಕರ್ಮಾನುಗಾಯಾಂ
ಸ್ರಷ್ಟಾ ಸಾಕ್ಷಾತ್ಸರ್ವತನ್ತ್ರಸ್ವತನ್ತ್ರಃ ॥

ಸಾಂಖ್ಯೇ ಯೋಗೇ ಭಾಟ್ಟತನ್ತ್ರೇ ಗುರೂಕ್ತೇ
ಶೈವೇ ಜೈನೇ ಶಾಂಕರೇ ಭಾಸ್ಕರೇ ಚ ।
ಶಾಕ್ತೇ ಬೌದ್ಧೇ ಯಾದವೇ ಗರ್ವಿತಾನಾಂ
ಪ್ರತ್ಯಾಖ್ಯಾತಾ ಸರ್ವತನ್ತ್ರಸ್ವತಂತ್ರಃ ॥

ಮೇಲಿನ ಶ್ಲೋಕಗಳಿಂದ ಅವರ ಪಾಂಡಿತ್ಯದ ವಿಸ್ತಾರವನ್ನು ಸುಲಭವಾಗಿ ಊಹಿಸಿಕೊಳ್ಳಬಹುದು. ಈ ವಿಷಯವನ್ನು ಆಚಾರ್ಯರವರೇ (ವೇಂಕಟ

3 'ಸಪ್ತತಿರತ್ನಮಾಲಿಕೆ' ಶ್ಲೋಕ ೨೬-೨೯.

ನಾಥರೇ) ತಮ್ಮ ಸಂಕಲ್ಪಸೂರ್ಯೋದಯದಲ್ಲಿ ' ವಿಂಶತ್ಯಬ್ದೇ ವಿಶ್ರುತ ನಾನಾವಿಧವಿದ್ಯಃ[4] ' ಎಂಬದಾಗಿ ಪರಮುಖೇನ ಹೇಳಿರುತ್ತಾರೆ.

ಹೀಗೆ ಇಪ್ಪತ್ತನೆಯ ವರ್ಷದಲ್ಲಿ ವಿದ್ಯಾಭ್ಯಾಸವು ಪೂರ್ಣವಾಗಲು ಆತ್ರೇಯರಾಮಾನುಜರು ವೇಂಕಟನಾಥರಿಗೆ ತಿರುಮಂಗೈ ಎಂಬ ಕನ್ಯೆಯನ್ನು ತಂದು ವಿವಾಹಮಾಡಿದರು. ಇದಾದ ಸ್ವಲ್ಪದಿನಗಳಲ್ಲಿಯೇ ಅವರು ಭಾಷ್ಯಕಾರರವರ ದಿವ್ಯಪಾದುಕೆಗಳನ್ನೂ ತಾವು ಉಪಯೋಗಿಸುತ್ತಿದ್ದ ಶಂಖಚಕ್ರಗಳನ್ನೂ ವೇಂಕಟನಾಥರಿಗೆ ದಯಪಾಲಿಸಿ ಅವರನ್ನು ಆಚಾರ್ಯರ ಸ್ಥಾನದಲ್ಲಿ ನಿಲ್ಲಿಸಿ ತಾವು ತಮ್ಮ ಭೌತಶರೀರವನ್ನು ತ್ಯಾಗ ಮಾಡಿದರು. ಅವರು ಪರಂಧಾಮವನ್ನೈದುವಾಗ ತಮ್ಮ ಶಿಷ್ಯರಿಗೆ ಅವರು ಮಾಡಬೇಕಾದ ಮಹತ್ಕಾರ್ಯವಾದ ವಿಶಿಷ್ಟಾದ್ವೈತಸಿದ್ಧಾಂತ ಸ್ಥಾಪನೆಯ ಮೂಲರೇಖೆಗಳನ್ನೆಲ್ಲ ವಿಶದೀಕರಿಸಿ ಆ ಕಾರ್ಯವು ಸುಲಲಿತವಾಗಿ ನಡೆಯುವುದಕ್ಕಾಗಿ ಗರುಡಮಂತ್ರವನ್ನು ಉಪದೇಶಿಸಿದರು.[5] ವೇಂಕಟನಾಥರು ಇದನ್ನು ಬಹುಭಕ್ತಿಯಿಂದ ಅನುಸಂಧಾನಮಾಡಿ ಅಧಿದೇವತೆಯಾದ ಗರುಡನನ್ನು ಸಾಕ್ಷಾತ್ಕರಿಸಿ ತಮ್ಮ ಕೆಲಸದಲ್ಲಿ ಕೃತಕೃತ್ಯರಾದರು.

## ಆಚಾರ್ಯರ ತಿರುವಹೀಂದ್ರಪುರಪ್ರವಾಸ

ಕೆಲವು ವರ್ಷಗಳನಂತರ ಅಂದರೆ ತಮ್ಮ ಇಪ್ಪತ್ತೆರಡು-ಇಪ್ಪತ್ತು ಮೂರನೆಯ ವರುಷದಲ್ಲಿ ವೇಂಕಟನಾಥರು ಜ್ಞಾನಾರ್ಜನೆಗಾಗಿಯೂ ವಿಶಿಷ್ಟಾದ್ವೈತಮತಪ್ರಚಾರಕ್ಕಾಗಿಯೂ ಪುಣ್ಯಸ್ಥಳಗಳಿಗೆ ಯಾತ್ರೆಹೊರಟು

---

4 'ಸಂಕಲ್ಪಸೂರ್ಯೋದಯ' ಶ್ಲೋ. ೧೫ ಇದೇ ವಿಷಯದಲ್ಲಿ ದೇಶಿಕಗದ್ಯವನ್ನೂ ನೋಡಿ.

5 ಅಪ್ಪುಳ್ಳಾರರೇ ಗರುಡಾವತಾರರೆಂದೂ ಪ್ರತೀತಿಯುಂಟು. ಇವರಿಗೆ ವಾದಿಹಂಸಾಂಬುವಾಹಾಚಾರ್ಯರೆಂಬ ಹೆಸರೂ ಉಂಟು. ಇವರ ವಿಷಯವಾಗಿ ಗೋಪಾಲಸೂರಿಯೆಂಬುವರು " ವಾದಿಹಂಸಾಂಬುವಾಹಾಚಾರ್ಯಸ್ತೋತ್ರ " ವನ್ನು ರಚಿಸಿರುತ್ತಾರೆ.

ಮೊದಲು ತಿರುವಹೀಂದ್ರಪುರವನ್ನು ಸೇರಿ, ದೇವನಾಯಕನ ದೇವಾಲಯ ದಿಂದಲೂ ಗರುಡನದಿಯಿಂದಲೂ ಉತ್ತಮವಾದ ಪ್ರಕೃತಿಸೌಂದರ್ಯ ದಿಂದಲೂ ಕೂಡಿದ ಆ ಸ್ಥಳವು ತಮ್ಮ ಕಾರ್ಯಕ್ಕೆ ಬಹಳ ಅನುಕೂಲ ವಾದುದೆಂದು ಅಲ್ಲಿಯೇ ಕೆಲವು ವರ್ಷಕಾಲ ನಿಂತರು.

ಆದರೆ ಎಷ್ಟುಕಾಲ ಅವರು ತಿರುವಹೀಂದ್ರಪುರದಲ್ಲಿದ್ದರೆಂಬ ವಿಷಯವು ತಿಳಿಯದು. ಸುಮಾರು ಹದಿನೈದು ವರುಷಗಳಕಾಲವಿದ್ದಿರ ಬಹುದು. ಇಲ್ಲಿ ಅವರಿಗೆ ಗರುಡಮಂತ್ರಪುರಶ್ಚರಣೆಯಿಂದ ಗರುಡ ದೇವರೂ ಅವರ ಮೂಲಕ ಹಯಗ್ರೀವರು ಪ್ರತ್ಯಕ್ಷರಾದರೆಂದು ಪ್ರತೀತಿ. ಹಯಗ್ರೀವರು ಆಚಾರ್ಯರವರಿಗೆ ಅಮೃತವನ್ನಿತ್ತು ಅವರು ವೇದಾಂತ ಭಾಷ್ಯಕಾರರಾಗುವುದಕ್ಕೆ ಅರ್ಹರೆಂಬುದನ್ನು ತಿಳಿಯಪಡಿಸಿ ಅಂತರ್ಧಾನ ರಾದರಂತೆ. ಇಲ್ಲಿ ಅನೇಕವರ್ಷಗಳಕಾಲ ಆಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತ, ತತ್ತ್ವಶಾಸ್ತ್ರ ಮೊದಲಾದವುಗಳ ವಿಷಯವಾಗಿ ಉಪನ್ಯಾಸ ಗಳನ್ನೂ, ಶಿಷ್ಯರಿಗೆ ಪಾಠಪ್ರವಚನಗಳನ್ನೂ ನಡೆಸುತ್ತಿದ್ದರು. ಅವರಿಗಿದ್ದ ಸಕಲಶಾಸ್ತ್ರಪಾಂಡಿತ್ಯ, ಅದ್ಭುತವಾದ ಉಪನ್ಯಾಸಶಕ್ತಿ, ವಾದನೈಪುಣ್ಯ ಇವುಗಳು ಎಲ್ಲೆಲ್ಲಿಯೂ ಹರಡಿ ಸುತ್ತಮುತ್ತಲಿನ ಪಂಡಿತರೆಲ್ಲರೂ ಅವರ ಸಭೆಗೆ ಬಂದು ಉಪದೇಶವನ್ನು ಕೇಳುತ್ತಿದ್ದರು.

ಆಚಾರ್ಯರು ಉಪದೇಶಿಕರು ಮಾತ್ರವಲ್ಲ; ಸ್ವತಃ ಉದ್ದಾಮ ಕವಿ ಗಳು. ತಿರುವಹೀಂದ್ರಪುರದಲ್ಲಿ ಮೊದಲು ದೇವತಾಸ್ತೋತ್ರರೂಪವಾದ ಕೆಲವು ಕವಿತೆಗಳನ್ನು ರಚಿಸಿದರು. ಇವುಗಳಲ್ಲಿ 'ಹಯಗ್ರೀವಸ್ತೋತ್ರ'[7]

---

6 ಇದಕ್ಕೆ ಈಗ ತಿರುವೇಂದಿಪುರವೆಂಬ ಹೆಸರಿದೆ. ಇದು ದಕ್ಷಿಣ ಆರ್ಕಾಟಿಗೆ ಸೇರಿದ ಕಡಲೂರಿನ ಸಮೀಪದಲ್ಲಿದೆ.

7 ಇದು ಅವರ ಆರಾಧ್ಯ ದೈವವಾದ ಹಯಗ್ರೀವರ ವಿಷಯವಾದುದು. ಇದರಲ್ಲಿ ೩೨ ಶ್ಲೋಕಗಳಿವೆ. ಇದರ ಶೈಲಿಯು ಬಹಳ ಪ್ರೌಢವಾಗಿಯೂ ಭಾವ ಗರ್ಭಿತವಾಗಿಯೂ ಇದೆ.

'ಗರುಡಪಂಚಾಶತ್[8]' 'ದೇವನಾಯಕಪಂಚಾಶತ್[9]' ಮತ್ತು 'ಅಚ್ಯುತ ಶತಕ[10]' ಇವು ಮುಖ್ಯವಾದುವು. ಇದೇ ಕಾಲದಲ್ಲಿ ರಚಿತವಾದ 'ಪರಮತಭಂಗ'ವೆಂಬ ತಮಿಳು ಗ್ರಂಥವು ಆಗ ಪ್ರಚಾರದಲ್ಲಿದ್ದ ದರ್ಶನ ಸಿದ್ಧಾಂತಗಳನ್ನು ಆಲೋಡನೆಮಾಡಿ ವಿಮರ್ಶೆಮಾಡಿರುವ ಖಂಡನ ಗ್ರಂಥ. ಈ ಗ್ರಂಥದಲ್ಲಿ ಲೌಕಾಯತಿಕ, ಮಾಧ್ಯಮಿಕ, ಯೋಗಾಚಾರ, ಸೌತ್ರಾಂತಿಕ, ವೈಭಾಷಿಕ, ಅದ್ವೈತ, ಜೈನ, ಭಾಸ್ಕರ, ವೈಶೇಷಿಕ, ವೈಯಾಕರಣ, ನೈಯಾಯಿಕ, ನಿರೀಶ್ವರಮೀಮಾಂಸಕ, ನಿರೀಶ್ವರ ಸಾಂಖ್ಯ, ಯೋಗಸಿದ್ಧಾಂತ ಮತ್ತು ಪಾಶುಪತ ಎಂಬ ಹದಿನೈದು ದರ್ಶನಗಳ ಖಂಡನವಿದೆ. ಈ ಗ್ರಂಥವು ಅವರು ತಿರುವಹೀಂದ್ರಪುರ

---

8 ಇದು ಸ್ರಗ್ಧರಾವೃತ್ತದಲ್ಲಿ ರಚಿತವಾದ ೫೧ ಶ್ಲೋಕಗಳನ್ನುಳ್ಳದ್ದು. ಇದರಲ್ಲಿ ತೋರುವ ಭಕ್ತಿಯ ಆವೇಶವು ಬಹು ಆಳವಾದುದು. ಆಚಾರ್ಯರಿಗೆ ತಿರುವಹೀಂದ್ರಪುರದಲ್ಲಿ ಗರುಡದೇವರು ಪ್ರತ್ಯಕ್ಷವಾದ ಕಾಲದಲ್ಲಿ ಅವರ ಸ್ತೋತ್ರರೂಪವಾಗಿ ಇದನ್ನು ರಚಿಸಿದರೆಂದು ಪ್ರತೀತಿ. ಶ್ರೀವೈಷ್ಣವರಲ್ಲಿ ಗರುಡದೇವರಿಗೆ ವಿಶೇಷವಾದ ಪ್ರಾಶಸ್ತ್ಯವುಂಟು. ಅವರಿಗೆ ಪೆರಿಯತಿರುವಡಿ (ಭಗವಂತನ ಹಿರಿಯಪಾದ) ಎಂಬ ವ್ಯವಹಾರವಿದೆ.

9 ಇದು ತಿರುವಹೀಂದ್ರಪುರದ ಸ್ವಾಮಿಯಾದ ದೇವನಾಯಕನ ವಿಷಯವಾದುದು.

10 ಇದು ಪ್ರಾಕೃತ ಭಾಷೆಯಲ್ಲಿ ರಚಿತವಾಗಿದೆ. ಇದಕ್ಕೆ ಸಂಸ್ಕೃತ ಛಾಯೆಯೂ ಉಂಟು. ಛಾಯೆಯನ್ನು ಆಚಾರ್ಯರು ರಚಿಸಿದಂತೆ ಕಾಣುವುದಿಲ್ಲ. ಈಚಿನವರು ಯಾರೋ ರಚಿಸಿರಬೇಕು. ಆಚಾರ್ಯರು ಪ್ರಾಕೃತಭಾಷೆಯಲ್ಲಿ ಅಚ್ಯುತ ಶತಕವನ್ನು ರಚಿಸುವುದಕ್ಕೆ ಪ್ರಾಕೃತ ಭಾಷಾಪಾಂಡಿತ್ಯಪ್ರದರ್ಶನೋದ್ದೇಶವು ಕಾರಣವೆಂದು ಒಂದು ಮತ; ಆಚಾರ್ಯರು ಹಿಂದೆ ಶಠಕೋಪಮಹಾಮುನಿಗಳು ನಾಯಕಾವಸ್ಥೆಯಲ್ಲಿ ಈಶ್ವರಸಾಕ್ಷಾತ್ಕಾರಮಾಡಿದುದನ್ನು ಮನಸಿನಲ್ಲಿಟ್ಟುಕೊಂಡು ತಾವೂ ಆ ಮಧುರಭಾವವನ್ನು ಅನುಭವಿಸಬೇಕೆಂದು ಯೋಚಿಸಿ ನಾಯಕಿಗೆ ಉಚಿತವಾದ ಭಾಷೆಯು ಪ್ರಾಕೃತವಾದುದರಿಂದ ಆ ಭಾಷೆಯಲ್ಲಿ ಬರೆದಿರುವರೆಂಬುದು ಮತ್ತೊಂದು ಮತ.

ದಲ್ಲಿ ಕೊಟ್ಟ ಉಪನ್ಯಾಸಗಳ ಸಾರವಿರಬೇಕು. ಇದು ಸಂಸ್ಕೃತಭಾಷೆಯ ವಿಶೇಷಪರಿಚಯವಿಲ್ಲದವರಿಗೆ ಬಹಳ ಉಪಯುಕ್ತವಾಗಿದೆ. ಇದೇ ಕಾಲ ದಲ್ಲಿ ರಚಿತವಾದ ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುವ 'ಗೋಪಾಲ ವಿಶಂತಿ' ಎಂಬ ಸ್ತೋತ್ರವೂ, ರಾಮಾಯಣದ ಸಾರವಾದ 'ರಘುವೀರ ಗದ್ಯವೂ' ಬಹು ಹೃದಯಂಗಮವಾಗಿವೆ. ಆಚಾರ್ಯರ ಸ್ತೋತ್ರಗಳಲ್ಲೆಲ್ಲ 'ಗೋಪಾಲವಿಶಂತಿ'ಯು ಅತಿಲಲಿತವಾದುದು.

ತಿರುವಹೀಂದ್ರಪುರದಲ್ಲಿ ಕೆಲವು ವರ್ಷಗಳಿದ್ದು ಅನಂತರ ಆಚಾ ರ್ಯರು ಪುನಃ ಕಾಂಚೀಪುರಕ್ಕೆ ತೆರಳಿದರು. ಅಲ್ಲಿ ಇವರು ಇದ್ದ ಕಾಲವ ನ್ನೆಲ್ಲಾ ಗ್ರಂಥರಚನೆಯಲ್ಲಿಯೇ ಕಳೆದರು. ಕಂಚಿಯ ವರದರಾಜಸ್ವಾಮಿಯ ವಿಚಾರವಾದ 'ವರದರಾಜಪಂಚಾಶತ್' ಎಂಬ ಸ್ತೋತ್ರವು ಈ ಕಾಲದ ಲ್ಲಿಯೇ ರಚಿತವಾದುದು. ಇದೇ ಕಾಲದಲ್ಲಿ ಪ್ರಪತ್ತಿಶಾಸ್ತ್ರಾರ್ಥಗರ್ಭಿತವಾದ 'ನ್ಯಾಸದಶಕ'ವೆಂಬ ಸಂಸ್ಕೃತಗ್ರಂಥವನ್ನೂ ಸಂಸ್ಕೃತವನ್ನು ತಿಳಿಯದಿರು ವವರ ಉಪಯೋಗಕ್ಕಾಗಿ 'ಅಡೈಕ್ಕಲಪತ್ತು[11]' 'ಅರ್ಥಪಂಚಕಮ್[12]' 'ಶ್ರೀವೈಷ್ಣವದಿನಚರಿ[13]' 'ತಿರುಚ್ಚಿನ್ನಮಾಲೈ[14]' 'ಪನ್ನಿರು ನಾಮಮ್[15]' ಎಂಬ ತಮಿಳುಗ್ರಂಥಗಳನ್ನು ರಚಿಸಿದರು. ಇವಾದ ಮೇಲೆ ಪುರಾಣಪ್ರಸಿದ್ಧವಾದ ಕಾಂಚೀಪುರದ ಮಹಾತ್ಮೆಯನ್ನು ವರ್ಣಿ

---

11 ಇದು ಶರಣಾಗತಿ ವಿಷಯಕವಾದ ಹತ್ತು ತಮಿಳು ಪದ್ಯಗಳು.

12 ಇದು ಭಕ್ತನು ತಿಳಿದುಕೊಂಡಿರಬೇಕಾದ ಐದು ಗುಣಗಳನ್ನು ತಿಳಿಸುತ್ತದೆ

13 ಇದು ಪಾಂಚರಾತ್ರಾಗಮಕ್ಕನುಗುಣವಾಗಿ ಶ್ರೀವೈಷ್ಣವನು ಹೇಗಿರಬೇಕೆಂ ಬುದನ್ನು ತಿಳಿಸುತ್ತದೆ.

14 ಇದು ದ್ವಾದಶೋರ್ಧ್ವಪುಂಡ್ರವನ್ನು ಧರಿಸುವ ಕ್ರಮವನ್ನು ತಿಳಿಸುವುದು.

15 ಇದು ಕಾಂಚೀಪುರದ ವರದರಾಜಸ್ವಾಮಿಯ ಉತ್ಸವಕಾಲದಲ್ಲಿ ಬರೆದ ಸ್ತೋತ್ರ. ತಮಿಳಿನಲ್ಲಿದೆ. ಇದರಲ್ಲಿ (ಚಿನ್ನಂಗಾಳೆ) ಚಿನ್ನದ ಕಹಳೆಯ ಕೂಗನ್ನು ವರ್ಣಿಸಿದೆ.

ಸುವ 'ಹಸ್ತಿಗಿರಿಮಾಹಾತ್ಮ್ಯ'ವೆಂಬ ಮಣಿಪ್ರವಾಳ (ಸಂಸ್ಕೃತ ಮತ್ತು ತಮಿಳು ಮಿಶ್ರವಾದ ಗ್ರಂಥ) ಗ್ರಂಥವೂ, 'ಶರಣಾಗತಿದೀಪಿಕೆ'[16] 'ಅಷ್ಟಭುಜಾಷ್ಟಕಮ್[17]' 'ಯಥೋಕ್ತಕಾರಿಸ್ತೋತ್ರಮ್[18]' 'ಕಾಮಾಸಿಕಾಷ್ಟಮ್[19]' ಎಂಬ ಸಂಸ್ಕೃತ ಸ್ತೋತ್ರಗಳೂ ರಚಿತವಾದುವು. ಆಚಾರ್ಯರು ಕಂಚಿಯಲ್ಲಿರುವಾಗಲೇ ತಿರುಪ್ಪುಕ್ಕುಟಿ ವಿಜಯರಾಘವರ ಉತ್ಸವಕಾಲದಲ್ಲಿ 'ಪರಮಾರ್ಥಸ್ತುತಿ'ಯೂ ಆದಾದ ಸ್ವಲ್ಪಕಾಲದಲ್ಲಿಯೇ ಸುದರ್ಶನರ ವಿಷಯವಾದ ಸ್ತೋತ್ರಗಳೂ ರಚಿತವಾದುವು.

## ಉತ್ತರದೇಶದ ಯಾತ್ರೆ

ವೇಂಕಟನಾಥರು ತಮ್ಮ ಮೂವತ್ತೈದನೆಯ ವರುಷದಲ್ಲಿ ಉತ್ತರದೇಶದ ಯಾತ್ರೆಗೆ ಹೊರಟು ಘಟಿಕಾಚಲಂ ತಿರುಚ್ಚಾನೂರು ಮೊದಲಾದ ಸ್ಥಳಗಳಲ್ಲಿ ಮಂಗಳಾಶಾಸನಮಾಡಿ ತಿರುಪತಿಗೆ ದಯಮಾಡಿಸಿದರು. ಅಲ್ಲಿ ಅವರು ಶ್ರೀನಿವಾಸನನ್ನು ಸಂದರ್ಶಿಸಿ ಭಕ್ತಿಪಾರವಶ್ಯದಿಂದ ಆತನನ್ನು ಕುರಿತು 'ದಯಾಶತಕ'ವೆಂಬ ನೂರು ಶ್ಲೋಕಗಳುಳ್ಳ ಸ್ತೋತ್ರವನ್ನು ಹಾಡಿದರು. ಈ ಸ್ತೋತ್ರವು ಬಹಳ ಗಂಭೀರವಾಗಿಯೂ, ಭಾವಗರ್ಭಿತವಾಗಿಯೂ, ಭಕ್ತಿರಸಪರಿಪೂರ್ಣವಾಗಿಯೂ ಇದೆ. ಇದರ ಪ್ರತಿದಶಕದಲ್ಲಿಯೂ ಬೇರೆಬೇರೆ ವೃತ್ತದಿಂದ ಭಗವಂತನ ಮೋಕ್ಷೈಕದಾತೃತ್ವ, ಸರ್ವಜ್ಞತ್ವ, ಅನಿಷ್ಟನಿವಾರಕತ್ವ, ಸೌಲಭ್ಯ, ಮೋಕ್ಷಮಾರ್ಗದರ್ಶಿತ್ವ, ಅವನನ್ನು ಸೇರಲು ಪ್ರಪತ್ತಿಯ ಆವಶ್ಯಕತೆ, ಅವನ ದಯಾರಸದ ಮಹಿಮೆ, ಅವತಾರವರ್ಣನೆ, ಮೋಕ್ಷತತ್ತ್ವದ ಸ್ವರೂಪ, ಇವುಗಳು ಕ್ರಮ

16 ಇದು ದೀಪಪ್ರಕಾಶರನ್ನು ಕುರಿತು ಹಾಡಿದ ಸ್ತೋತ್ರ.

17 ಇದು ಗಜೇಂದ್ರವರದರ ವಿಷಯವಾದುದು.

18 ಇದರಲ್ಲಿ ತಿರುಮಂಗೈಯಾಳ್ವಾರರ ವರ ವೈಭವವು ವರ್ಣಿಸಿದೆ.

19 ವೇಗವತೀನದಿಯ ದಡದಲ್ಲಿರುವ ಕಾಮಾಸಿಕ ನರಸಿಂಹನ ವಿಷಯವಾದುದು ಈ ಸ್ತೋತ್ರ.

ವಾಗಿ ವರ್ಣಿತವಾಗಿವೆ. ವಿಶಿಷ್ಟಾದ್ವೈತ ಮತದಲ್ಲಿ ನಿರೂಪಿತವಾಗಿರುವ ಭಕ್ತಿಪ್ರಪತ್ತಿಗಳ ಸ್ವರೂಪವನ್ನು ತಿಳಿಯುವುದಕ್ಕೆ ಇದು ಉತ್ತಮವಾದ ಸ್ತೋತ್ರ. ಇದು ಪ್ರಪತ್ತಿಗೆ ಮೂಲಭೂತವಾದ ದ್ವಯಮಂತ್ರದ ವಿಸ್ತರಣವೆಂಬುದು ಪಂಡಿತರ ಅಭಿಪ್ರಾಯ. ಇದರಲ್ಲಿ ಭಗವಂತನ ದಯೆಯ ಸ್ವರೂಪವೂ ಅದರ ಮೇಲ್ಮೆಯೂ ಬಹಳ ಹೃದಯಂಗಮವಾಗಿ ವರ್ಣಿತವಾಗಿವೆ. ಉದಾಹರಣೆಗಾಗಿ ಮುಂದಿನ ಪದ್ಯವನ್ನು ನೋಡಬಹುದು—

**ಫಲವಿತರಣದಕ್ಷಂ ಪಕ್ಷಪಾತಾನಭಿಜ್ಞಂ**
**ಪ್ರಗುಣಮನುವಿಧೇಯಂ ಪ್ರಾಪ್ತಪದ್ಮಾಸಹಾಯಮ್ ।**
**ಮಹತಿ ಗುಣಸಮಾಜೇ ಮಾನಪೂರ್ವಂ ದಯೇ ತ್ವಂ**
**ಪ್ರತಿವದಸಿ ಯಥಾರ್ಹಂ ಪಾಪ್ಮನಾಂ ಮಾಮಕಾನಾಮ್ ॥**[20]

(ಭಗವಂತನಿಗೆ ಪಕ್ಷಪಾತವೆಂಬುದಿಲ್ಲ. ಅವರವರ ಕರ್ಮಾನುಸಾರವಾಗಿ ಪ್ರತಿಯೊಬ್ಬರಿಗೂ ಫಲವನ್ನು ಕೊಡುವನು. ಆದರೆ ದಯಾಳುವಾದ ಅವನು ಲಕ್ಷ್ಮೀಸಮೇತನಾಗಿ ಪ್ರತಿಯೊಬ್ಬನ ಪಾಪಪುಣ್ಯಗಳ ವಿಮರ್ಶೆಗೆ ಕುಳಿತಾಗ ಅವನ ಸದ್ಗುಣಗಳ ರಾಶಿಯಲ್ಲಿ ದಯೆಯೆಂಬುದು ಮುಂದೆ ಬಂದು ಮನುಷ್ಯನ ಪಾಪಗಳಿಗೆ ಕಾರಣವನ್ನು ತೋರಿಸಿ ಅದನ್ನು ಸಮರ್ಥಿಸಿ ಕ್ಷಮಿಸುವಂತೆ ಮಾಡುತ್ತದೆ.)

ತಿರುಪತಿಯಲ್ಲಿ ದೇವರ ಸೇವೆಯನ್ನು ಮುಗಿಸಿಕೊಂಡು ಹೊರಟು ಆಚಾರ್ಯರು ತುಂಗಭದ್ರಾತೀರದಲ್ಲಿ ಅವರ ಸ್ನೇಹಿತರಾಗಿದ್ದ ಪ್ರಸಿದ್ಧ ವಿದ್ವಾಂಸರಾದ ವಿದ್ಯಾರಣ್ಯರನ್ನು[21] ಸಂಧಿಸಿದರು. ಅಲ್ಲಿ ಎಷ್ಟು ದಿನ

---

20 ದಯಾಶತಕ ಶ್ಲೋಕ, ೩೩.

21 ವಿದ್ಯಾರಣ್ಯರು ಎಷ್ಟು ವರ್ಷ ಜೀವಿಸಿದ್ದರು, ಅವರ ಸರಿಯಾದ ಕಾಲ ಯಾವುದು ಎಂಬುದು ಖಚಿತವಾಗಿ ತಿಳಿದುಬಂದಿಲ್ಲ. ಹಂಪೆಯ ದೇವಸ್ಥಾನದ ಶಾಸನದ ಆಧಾರದ ಮೇಲೆ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಅವರು ಕ್ರಿ. ಶ. ೧೩೩೬ರಲ್ಲಿ (ಶಾ. ಶ. ೧೨೫೮ ನಾಗೇಷು ಕರ್ಣನಿಮಿತನೃಪತೇಃ ಶಾಲಿವಾಹಸ್ಯ) ವಿಜಯನಗರ ಸಾಮ್ರಾ

ಗಳಿದ್ದರು, ಯಾವ ವಿಷಯದಲ್ಲಿ ಚರ್ಚೆಯನ್ನು ನಡೆಸಿದರು ಎಂಬ ವಿಷಯವನ್ನು ವಿಶದವಾಗಿ ತಿಳಿಯಲು ಸಾಕಾದಷ್ಟು ಆಧಾರಗಳಿಲ್ಲ. ಅಲ್ಲಿಂದ ಆಚಾರ್ಯರು ಮುಂದುವರಿದು ಬೃಂದಾವನ, ಮಧುರೆ, ಅಯೋಧ್ಯೆ, ಕಾಶಿ ಮೊದಲಾದ ಸ್ಥಳಗಳ ಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗಿ, ಪ್ರಾಚಿ, ಶ್ರೀಕೂರ್ಮ, ಅಹೋಬಲ, ತಿರುವಳ್ಳೂರು, ತಿರುನಿನ್ರವೂರು, ತಿರುವಲ್ಲಿಕ್ಕೇಣಿ, ತಿರುಕ್ಕಡಲ್, ಶ್ರೀ ಪೆರಂಬೂದೂರು ಮೊದಲಾದ ಸ್ಥಳಗಳಲ್ಲಿ ಮಂಗಳಾಶಾಸನವನ್ನು ಮಾಡಿ ಸುಮಾರು ಕ್ರಿ. ಶ. ೧೩೧೦ ನೆಯ ವರ್ಷದಲ್ಲಿ ಕಂಚಿಗೆ ಬಂದು ಸೇರಿದರು.

ಪವಿತ್ರವಾದ ಈ ಯಾತ್ರೆಯು ಮುಗಿದಮೇಲೆ ವೆಂಕಟನಾಥರು ಕೆಲವು ಕಾಲ ಕಂಚಿಯಲ್ಲಿಯೇ ನಿಂತರು. ಇಲ್ಲಿ ಇವರು ತಮ್ಮ ಕಾಲ ವನ್ನೆಲ್ಲಾ ವೇದವೇದಾಂತಕಾಲಕ್ಷೇಪ, ನಿತ್ಯಕರ್ಮಾನುಷ್ಠಾನ, ಶಾಸ್ತ್ರ

---

ಜ್ಯವನ್ನು ಸ್ಥಾಪಿಸಿದರೆಂದು ಬರೆದಿದ್ದಾರೆ. ಈ ಶಾಸನದ ಸತ್ಯಾಂಶದ ವಿಷಯದಲ್ಲಿ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ. ಶೃಂಗೇರಿಯ ಮಠದ ಪಟ್ಟಿಯಪ್ರಕಾರ ಮಾಧವಾಚಾರ್ಯರು ಶಾ. ಶ. ೧೨೫೩ನೆಯ ವರ್ಷಕ್ಕೆ ಸರಿಯಾದ ತಮ್ಮ ೬೩ನೆಯ ವಯಸ್ಸಿನಲ್ಲಿ ವಿದ್ಯಾರಣ್ಯರೆಂಬ ಹೆಸರನ್ನು ಪಡೆದು ಶೃಂಗೇರಿಯಮಠದ ಸನ್ಯಾಸವನ್ನು ಸ್ವೀಕರಿಸಿದರೆಂದು ತಿಳಿದುಬರುತ್ತದೆ. ಮೇಲೆ ಹೇಳಿರುವ ಮಾಧವವಿದ್ಯಾರಣ್ಯರ ಐಕ್ಯತೆಯ ವಿಷಯದಲ್ಲಿಯೂ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ. ಮಠದ ಪಟ್ಟಿಯಪ್ರಕಾರ ವಿದ್ಯಾರಣ್ಯರ ಜನನವು ಕ್ರಿ.ಶ. ೧೨೬೮ನೆಯ ವರ್ಷದಲ್ಲಿ ಆಗುತ್ತದೆ. ಇವರ ವಿಷಯವಾದ ಶಾಸನಗಳೆಲ್ಲ ವಿಶೇಷವಾಗಿ ಇಮ್ಮಡಿ ಹರಿಹರನ ಕಾಲದವು. ಸುಮಾರು ಕ್ರಿ.ಶ. ೧೩೮೬ ರ ವರೆಗೂ ಸಿಕ್ಕುತ್ತವೆ. ಇದರ ಪ್ರಕಾರ ಇವರು ಒಂದುನೂರು ಹದಿನೆಂಟು ವರ್ಷಗಳಿಗಿಂತ ಹೆಚ್ಚುಕಾಲ ಜೀವಿಸಿರಬೇಕಾಗುತ್ತದೆ. ವಿದ್ಯಾರಣ್ಯರ ವಿಷಯವಾದ ಯಾವ ಗ್ರಂಥಗಳಲ್ಲಿಯೂ ಅವರು ಇಷ್ಟೇ ವರ್ಷ ಜೀವಿಸಿದ್ದರೆಂದು ಹೇಳಿರುವಂತೆ ಕಾಣುವುದಿಲ್ಲ. ವೇಂಕಟನಾಥರು ನೂರು ವರ್ಷಗಳಕಾಲ ಜೀವಿಸಿದ್ದು ಕ್ರಿ.ಶ. ೧೩೬೯ರಲ್ಲಿ ಪರಂಧಾಮವನ್ನೈದಿದುದರಿಂದಲೂ ವಿದ್ಯಾರಣ್ಯರು ಶಾಸನಗಳಪ್ರಕಾರ ಕ್ರಿ.ಶ. ೧೩೮೬ರ ವರೆಗೆ ಜೀವಂತರಾಗಿದ್ದುದರಿಂದಲೂ ವಿದ್ಯಾರಣ್ಯರು ವೇಂಕಟನಾಥರ ಸಮಕಾಲೀನರಾದರೂ ವಯಸ್ಸಿನಲ್ಲಿ ಚಿಕ್ಕವರಿರಬಹುದು.

ಭ್ಯಾಸ, ಗ್ರಂಥರಚನೆ ಮೊದಲಾದವುಗಳಲ್ಲಿ ಕಳೆಯುತ್ತಿದ್ದರು. ಅವರ ಅನ್ಯಾದೃಶವಾದ ಪಾರಮಾರ್ಥಿಕಜೀವನ, ಐಹಿಕವಿಷಯದಲ್ಲಿ ವಿರಕ್ತಿ ಇವು ಜನಗಳಿಗೆ ಆಶ್ಚರ್ಯವನ್ನುಂಟುಮಾಡುತ್ತಿದ್ದವು. ಅವರು ಕೇವಲ ಉಂಛವೃತ್ತಿಯಿಂದ (ಭಿಕ್ಷೆ) ಜೀವಿಸುತ್ತಿದ್ದರು. ದ್ರವ್ಯಾರ್ಜನೆಯ ಹವ್ಯಾಸಕ್ಕೆ ಅವರ ಮನಸ್ಸು ಹೋಗಲೇ ಇಲ್ಲ. ಸುಮಾರು ಇದೇ ಕಾಲದಲ್ಲಿ ಆಚಾರ್ಯರ ಪ್ರತಿಕಕ್ಷಿಗಳಿಂದ ಪ್ರೇರಿತನಾದ ಬ್ರಹ್ಮಚಾರಿಯೊಬ್ಬನು ಬಂದು ತನ್ನ ಮದುವೆಗಾಗಿ ಧನಸಹಾಯಮಾಡಬೇಕೆಂದು ಕೇಳಿದನಂತೆ. ತಾವೇ ಉಂಛವೃತ್ತಿಯಿಂದ ಜೀವಿಸುತ್ತಿದ್ದ ಆಚಾರ್ಯರು ಇವನಿಗೆ ಹೇಗೆ ಸಹಾಯಮಾಡುವುದು? ಆದರೂ ಅವರು ಹಿಂಜರಿಯದೆ ಅವನಿಗೆ ಅಭಯವನ್ನಿತ್ತು ಸಂಪತ್ತಿಗೆ ಅಧಿದೇವತೆಯಾದ ಶ್ರೀದೇವಿಯನ್ನು 'ಶ್ರೀಸ್ತುತಿ' ಯೆಂಬ ಇಪ್ಪತ್ತೈದು ಶ್ಲೋಕಗಳುಳ್ಳ ಸ್ತೋತ್ರದಿಂದ ಪ್ರಾರ್ಥಿಸಿ ಅವಳ ಕಟಾಕ್ಷವು ಆ ಬ್ರಹ್ಮಚಾರಿಯ ಮೇಲೆ ಬೀಳುವಂತೆ ಮಾಡಿ ಅವನನ್ನು ಐಶ್ವರ್ಯವಂತನನ್ನಾಗಿ ಮಾಡಿದರೆಂದು ಪ್ರತೀತಿ. ಶ್ರೀಸ್ತುತಿಯ ರಚನೆಗೆ ಇದೇ ಕಾರಣವು ಅಹುದೋ ಅಲ್ಲವೋ ಎಂಬು ದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಲ್ಲದಿದ್ದರೂ ಅದು ಉತ್ತಮವಾದ ಸ್ತೋತ್ರವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.[22]

## ಶ್ರೀರಂಗದಲ್ಲಿ ಆಚಾರ್ಯಪೀಠವನ್ನಲಂಕರಿಸಿದುದು

ಈ ಕಾಲಕ್ಕೆ ಸರಿಯಾಗಿ ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಮಾತೃ ಸ್ಥಾನವಾಗಿದ್ದ ಶ್ರೀರಂಗದಲ್ಲಿ ಒಂದು ದೊಡ್ಡ ವಿಪತ್ತು ಪ್ರಾಪ್ತ

---

22 ವೇಂಕಟನಾಥರು ವಿಜಯನಗರಕ್ಕೆ ದಯಮಾಡಿಸಬೇಕೆಂದು ವಿದ್ಯಾರಣ್ಯ ರಿಂದ ಆಹ್ವಾನವು ಬಂದುದು ಈ ಕಾಲದಲ್ಲೆಂದು ಗುರುಪರಂಪರೆಯಲ್ಲಿ ಉಕ್ತವಾಗಿದೆ. ಕ್ರಿ.ಶ. ೧೩೩೬ ರಲ್ಲಿ ವಿಜಯನಗರಸಾಮ್ರಾಜ್ಯವು ಸ್ಥಾಪಿತವಾಯಿತಾದುದರಿಂದ ಆಚಾರ್ಯರು ಸತ್ಯಮಂಗಲದಲ್ಲಿದ್ದಾಗ ಅವರಿಗೆ ಈ ಆಹ್ವಾನವು ಬಂದಿತೆಂಬುದಕ್ಕೆ ಇರುವ ಆಧಾರಗಳನ್ನೇ ನಂಬುವುದು ಉಚಿತವಾಗಿ ತೋರುತ್ತದೆ.

ವಾಯಿತು. ಅದ್ವೈತಿಗಳು ಪ್ರಬಲರಾಗಿ ಶ್ರೀವೈಷ್ಣವರನ್ನು ಸೋಲಿಸುವುದರಲ್ಲಿದ್ದರು. ಶ್ರೀರಂಗದಲ್ಲಿ ಸುದರ್ಶನಭಟ್ಟರೂ, ಪ್ರಬಂಧಶಾಖಾನುಯಾಯಿಗಳಾದ ಪಿಳ್ಳೈಲೋಕಾಚಾರ್ಯರೂ, ಪೆರಿಯಆಚ್ಚಾನ್‌ಪಿಳ್ಳೈ ಮೊದಲಾದವರು ಇದ್ದುದೇನೋ ನಿಜ. ಆದರೆ, ಭಟ್ಟರು ಬಹಳ ವೃದ್ಧರಾಗಿದ್ದುದರಿಂದಲೂ ಇತರರು ವಾದದಲ್ಲಿ ವಿಶೇಷ ಸಮರ್ಥರಲ್ಲದುದರಿಂದಲೂ ಅಲ್ಲಿದ್ದವರು ತಮ್ಮ ಪ್ರತಿಕಕ್ಷಿಗಳನ್ನು ಜಯಿಸಲಾಗಲಿಲ್ಲ. ಆಗ ಅವರೆಲ್ಲರೂ ಖಿನ್ನಮನಸ್ಕರಾಗಿ ಕರ್ತವ್ಯಕಾರ್ಯದಲ್ಲಿ ಒಟ್ಟುಗೂಡಿ ಆಲೋಚಿಸಿ ಕಂಚಿಯಲ್ಲಿರುವ ವೇಂಕಟನಾಥರನ್ನು ಕರೆಯಿಸಬೇಕೆಂದು ನಿಶ್ಚಯಿಸಿ ಶ್ರೀರಂಗನಾಥದೇವರಿಂದ ಶ್ರೀಮುಖವನ್ನು ಕಳುಹಿಸಿದರು. ವೈರಾಗ್ಯವೇ ಮೂರ್ತಿವೆತ್ತಂತಿದ್ದ ಆಚಾರ್ಯರು ಆಗಿನ ಸನ್ನಿವೇಶಗಳನ್ನು ಯಥಾವತ್ತಾಗಿ ಮನನಮಾಡಿಕೊಂಡು ಸಿದ್ಧಾಂತಸ್ಥಾಪನೆಯು ತಮ್ಮ ಪ್ರಥಮಕರ್ತವ್ಯವೆಂದು ತಿಳಿದು ಭಗವಂತನ ಆಜ್ಞೆಯನ್ನು ಶಿರಸಾವಹಿಸಿ ಸ್ವಲ್ಪವೂ ಸಾವಕಾಶಮಾಡದೆ ತಮ್ಮ ಶಿಷ್ಯರುಗಳೊಡನೆ ಶ್ರೀರಂಗಕ್ಕೆ ದಯಮಾಡಿ ಹಿಂದೆ ಶ್ರೀ ರಾಮಾನುಜಾಚಾರ್ಯರು ಅಲಂಕರಿಸಿದ್ದ ಆಚಾರ್ಯಪೀಠದಲ್ಲಿ ಪ್ರತಿಷ್ಠಾಪಿತರಾಗಿ ಅಲ್ಲಿಗೆ ಬಂದಿದ್ದ ಅದ್ವೈತಪಂಡಿತರೊಡನೆ ವಾದವನ್ನು ಪ್ರಾರಂಭಿಸಿದರು. ವಾದವು ಎಂಟುದಿನಗಳವರೆಗೆ ನಡೆಯಿತು. ಅದ್ವೈತಿಗಳು ಪರಾಜಿತರಾಗಲು ವಿಶಿಷ್ಟಾದ್ವೈತಸಿದ್ಧಾಂತಸ್ಥಾಪನೆಯಾಯಿತು. ಈ ವಾದದ ಸಾರಾಂಶವೇ "ಶತದೂಷಿಣಿ" ಎಂಬ ಖಂಡನ ಗ್ರಂಥ. ಇದಕ್ಕೆ ಅಪ್ಪಯ್ಯದೀಕ್ಷಿತರ ಸಮಕಾಲೀನರಾದ ಚೋಳಸಿಂಹಪುರದ ದೊಡ್ಡಯ್ಯಾಚಾರ್ಯರು 'ಚಂಡಮಾರುತ' ವೆಂಬ ವಿಸ್ತಾರವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಶತದೂಷಿಣಿಯಲ್ಲಿ ಅದ್ವೈತಸಿದ್ಧಾಂತವನ್ನು ಖಂಡಿಸುವ ನೂರು ವಾದಗಳಿವೆ. ಆದರೆ ಈಗ ಉಪಲಬ್ಧವಾಗಿರುವುದು ಅರವತ್ತಾರು ಮಾತ್ರ.

ಅದ್ವೈತಿಗಳು ಪರಾಜಿತರಾದಮೇಲೆ ಆಚಾರ್ಯರು ಶ್ರೀರಂಗನಾಥನ ಆಜ್ಞೆಯಂತೆ ಶ್ರೀರಂಗದಲ್ಲಿಯೇ ನಿಂತರು. ಇಲ್ಲಿಯೂ ಇವರು ಗ್ರಂಥ ರಚನಾಕಾರ್ಯವನ್ನು ನಿಲ್ಲಿಸಲಿಲ್ಲ. ಶಿಷ್ಯರಿಗೆ ಪ್ರವಚನವನ್ನು ಮಾಡಿಸುತ್ತಲೂ ವ್ಯಾಖ್ಯಾನವನ್ನು ರಚಿಸುತ್ತಲೂ ಇದ್ದುದಲ್ಲದೆ ಅನೇಕ ಸ್ವತಂತ್ರ ಗ್ರಂಥಗಳನ್ನು ರಚಿಸಿದರು. ಈ ಕಾಲದಲ್ಲಿ ರಚಿತವಾದ 'ತತ್ತ್ವಟೀಕೆ' ಎಂಬುದು ಶ್ರೀಭಾಷ್ಯದ ಉತ್ತಮವಾದ ಟೀಕು. 'ತಾತ್ಪರ್ಯ ಚಂದ್ರಿಕೆ' ಯು ಗೀತಾಭಾಷ್ಯದ ಉದ್ದಾಮವಾದ ವ್ಯಾಖ್ಯಾನ. 'ನ್ಯಾಯಪರಿಶುದ್ಧಿ' 'ನ್ಯಾಯಸಿದ್ಧಾಂಜನ' ಎಂಬಿವು ಪ್ರಸಿದ್ಧಪ್ರಮಾಣಗ್ರಂಥಗಳು. ನ್ಯಾಯ ಪರಿಶುದ್ಧಿಯು ಪ್ರಮಾಣವಿಷಯವನ್ನೂ, ನ್ಯಾಯಸಿದ್ಧಾಂಜನವು ಪ್ರಮೇಯವಿಷಯವನ್ನೂ ಕುರಿತು ವಿಚಾರಮಾಡುತ್ತವೆ. 'ಸೇಶ್ವರಮೀಮಾಂಸ' ವು ಪೂರ್ವಮೀಮಾಂಸಕ್ಕೂ ಉತ್ತರಮೀಮಾಂಸಕ್ಕೂ ಇರುವ ಸಂಬಂಧವನ್ನು ತಿಳಿಸಿ, ಪೂರ್ವಮೀಮಾಂಸವು ನಿರೀಶ್ವರವಾದವಲ್ಲವೆಂಬುದನ್ನು ತೋರಿಸುವುದಕ್ಕಾಗಿ ಹುಟ್ಟಿದ (ಜೈಮಿನಿಯ) ವ್ಯಾಖ್ಯಾನಗ್ರಂಥ. 'ತತ್ತ್ವಮುಕ್ತಾಕಲಾಪ'[23] ವೆಂಬುದು ವಿಶಿಷ್ಟಾದ್ವೈತಸಿದ್ಧಾಂತರೀತ್ಯಾಪ್ರಪಂಚದ ಸ್ಥಿತಿಯನ್ನು ವರ್ಣಿಸುವುದು. (ಇದು ಸ್ರಗ್ಧರಾವೃತ್ತದಲ್ಲಿ ಬರೆದ ಐನೂರು ಶ್ಲೋಕಗಳನ್ನುಳ್ಳದಾಗಿದೆ. ಇದಕ್ಕೆ ಆಚಾರ್ಯರೇ 'ಸರ್ವಾರ್ಥಸಿದ್ಧಿ' ಯೆಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ.) 'ಅಧಿಕರಣಸಾರಾವಳಿ' ಯು ಅನೇಕ ವಿಧವಾದ ವೇದಾಂತಸೂತ್ರಗಳ ಚರ್ಚೆಯನ್ನು ಕ್ರೋಢೀಕರಿಸಿ ಹೇಳುವ ಸಂಸ್ಕೃತ ಪದ್ಯಗ್ರಂಥ. ಈ ಗ್ರಂಥಗಳ ಜೊತೆಗೆ ಆಚಾರ್ಯರು ಶ್ರೀಭೂದೇವಿ

---

23 ಇದಕ್ಕೆ ತಾತಯ್ಯದೀಕ್ಷಿತರೆಂಬ ಅಪರನಾಮಧೇಯವುಳ್ಳ ಶ್ರೀನಿವಾಸಾಚಾರ್ಯರ ಶಿಷ್ಯರಾದ ಸೌಮ್ಯವರದರಾಮಾನುಜಮುನಿಗಳಿಂದ ರಚಿತವಾದ 'ಗೂಢಪ್ರಕಾಶಿಕಾ' ಎಂಬ ವ್ಯಾಖ್ಯಾನವು ಮದ್ರಾಸ್ ಪ್ರಾಚ್ಯಕೋಶಾಗಾರದಲ್ಲಿದೆ. ಪ್ರೊ. ಮ. ರಂಗಾಚಾರ್ಯರ 1910-13 ನೆಯ ವರ್ಷದ ತ್ರೈವಾರ್ಷಿಕ ಸೂಚಿಯ 1010-11 ನೆಯ ಪುಟವನ್ನು ನೋಡಿ.

ಯರ ವಿಷಯವಾಗಿಯೂ ವಿಷ್ಣುವಿನ ದಶಾವತಾರದ ವಿಷಯವಾಗಿಯೂ, ಶ್ರೀ ರಾಮಾನುಜಾಚಾರ್ಯರ ವಿಷಯವಾಗಿಯೂ, 'ಗೋದಾಸ್ತುತಿ' 'ಭೂಸ್ತುತಿ' 'ದಶಾವತಾರಸ್ತೋತ್ರಂ' 'ಯತಿರಾಜಸಪ್ತತಿ' ಎಂಬ ಸ್ತೋತ್ರಗಳನ್ನೂ ಅನುಗ್ರಹಿಸಿದರು. ತಮ್ಮ ಶಿಷ್ಯರ ಪ್ರಾರ್ಥನೆಯಮೇರೆ ಅವರ ಉಪಯೋಗಕ್ಕಾಗಿ ಶ್ರೀ ವೈಷ್ಣವರ ದಿನಚರಿಯೇ ಮೊದಲಾದವು ಗಳಿಗೆ ಸಂಬಂಧಪಟ್ಟ 'ಸಚ್ಚರಿತ್ರರಕ್ಷಾ' 'ರಹಸ್ಯರಕ್ಷಾ' 'ಪಾಂಚರಾತ್ರ ರಕ್ಷಾ' 'ನಿಕ್ಷೇಪರಕ್ಷಾ' 'ಗೀತಾರ್ಥಸಂಗ್ರಹರಕ್ಷಾ' ಮುಂತಾದುವುಗಳನ್ನು ರಚಿಸಿದರು. ಇವುಗಳಲ್ಲಿ ಸಚ್ಚರಿತ್ರರಕ್ಷೆಯು ಶ್ರೀವೈಷ್ಣವರ ನಿತ್ಯಕರ್ಮಾ ನುಷ್ಠಾನಕ್ಕೆ ಸಂಬಂಧಪಟ್ಟುದು. ಪಾಂಚರಾತ್ರರಕ್ಷೆಯು ಪಾಂಚರಾತ್ರ ಸಂಪ್ರದಾಯವು ವೈದಿಕವಾದುದೆಂಬುದನ್ನು ಸ್ಥಾಪಿಸುವ ಗ್ರಂಥ. ನಿಕ್ಷೇ ಪರಕ್ಷೆಯುಶರಣಾಗತಿಸಂಬಂಧವಾದದ್ದು. ಯಾಮುನಾಚಾರ್ಯರ ಗೀತಾರ್ಥ ಸಂಗ್ರಹದ ವ್ಯಾಖ್ಯಾನವೇ ಗೀತಾರ್ಥಸಂಗ್ರಹರಕ್ಷೆ. ಇವಲ್ಲದೆ ಆಚಾರ್ಯರು ಈ ಕಾಲದಲ್ಲಿ ಪ್ರಪತ್ತಿಶಾಸ್ತ್ರಕ್ಕೆ ಸಂಬಂಧಪಟ್ಟ 'ನ್ಯಾಸತಿಲಕ,' 'ನ್ಯಾಸ ವಿಂಶತಿ' ಮೊದಲಾದ ಗ್ರಂಥಗಳನ್ನೂ ಮೀಮಾಂಸಾಶಾಸ್ತ್ರಕ್ಕೆ ಉಪೋ ದ್ಘಾತರೂಪವಾಗಿರುವ 'ಮೀಮಾಂಸಾಪಾದುಕಾ' ಎಂಬ ಪದ್ಯಗ್ರಂಥ ವನ್ನೂ ರಚಿಸಿದರು. ಸರ್ವರಿಗೂ ಮಂತ್ರಾರ್ಥವು ತಿಳಿಯುವಹಾಗೆ ಮಣಿ ಪ್ರವಾಳದಲ್ಲಿ ಸಿದ್ಧಾಂತಪ್ರಕರಣಗ್ರಂಥಗಳಾದ 'ತತ್ತ್ವಪದವಿ' 'ರಹಸ್ಯ ಪದವಿ' 'ತತ್ತ್ವನವನೀತ' 'ರಹಸ್ಯನವನೀತ' 'ತತ್ತ್ವರತ್ನಾವಳಿ' 'ಪರಮಪದಸೋಪಾನ' ಮೊದಲಾದವುಗಳನ್ನು ಅನುಗ್ರಹಿಸಿದುದು ಈ ಕಾಲದಲ್ಲಿಯೇ.

---

## ವಿದ್ಯಾರಣ್ಯರಿಗೂ ಮತ್ತು ಅಕ್ಷೋಭ್ಯಮುನಿಗಳಿಗೂ ನಡೆದ ವಾದ

ಆಚಾರ್ಯರು ಶ್ರೀರಂಗದಲ್ಲಿರುವಾಗಲೇ ಪ್ರಸಿದ್ಧ ವಿದ್ವಾಂಸರುಗಳಾದ ಅಕ್ಷೋಭ್ಯಮುನಿಗಳಿಗೂ[24] ವಿದ್ಯಾರಣ್ಯರಿಗೂ ವಾದವು ನಡೆಯಿತು.

---

24 ಅಕ್ಷೋಭ್ಯಮುನಿಗಳು ಮಧ್ವಾಚಾರ್ಯರ ಶಿಷ್ಯರಾದುದರಿಂದ ಇವರ ಕಾಲವನ್ನು ಮಧ್ವಾಚಾರ್ಯರ ಕಾಲದ ಸಹಾಯದಿಂದ ನಿರ್ಧರಿಸಬೇಕು. ಸಂಪ್ರದಾಯ ಗ್ರಂಥಗಳಿಂದ ಮಧ್ವಾಚಾರ್ಯರು ಯಾವದೋ ಒಂದು ವಿಲಂಬಿ ಸಂವತ್ಸರದಲ್ಲಿ ಜನಿಸಿದರೆಂದೂ ತಮ್ಮ ೭೯ನೆಯ ವರ್ಷಕ್ಕೆ ಸರಿಯಾದ ಪಿಂಗಳ ಸಂವತ್ಸರದಲ್ಲಿ ಬದರೀಪ್ರವೇಶಮಾಡಿದರೆಂದೂ ತಿಳಿದುಬರುತ್ತದೆ. ಊಹಿಸಬಹುದಾದ ವಿಲಂಬಿಸಂವತ್ಸರವು ೧೧೧೮, ೧೧೭೮ ಮತ್ತು ೧೨೩೮ ರಲ್ಲಿಯೂ ಮತ್ತು ಪಿಂಗಳವು ೧೧೯೮, ೧೨೫೮, ೧೩೭೭ ರಲ್ಲಿಯೂ ಬರುವುವು. ಉತ್ತರಾದಿಮಠದ ಪಟ್ಟಿಗಳು ಮಧ್ವಾಚಾರ್ಯರು ೧೧೧೮ ರಿಂದ ೧೧೯೮ ರ ವರೆಗೆ ಜೀವಿತರಾಗಿದ್ದರೆಂದು ಹೇಳುವುವು. ಮಧ್ವವಿಜಯದ ಕರ್ತರಾದ ಮ॥ ರಾ॥ ಪದ್ಮನಾಭಾಚಾರ್ಯರವರೂ ಇವೇ ಸರಿಯೆಂದು ಅಭಿಪ್ರಾಯಪಡುವರು. ನವೀನಪರಿಶೋಧನೆಯಿಂದ ಮಧ್ವಾಚಾರ್ಯರಿಗೆ ಪದ್ಮನಾಭತೀರ್ಥ, ನರಹರಿತೀರ್ಥ, ಮಧ್ವತೀರ್ಥ, ಅಕ್ಷೋಭ್ಯತೀರ್ಥ ಎಂಬ ನಾಲ್ಕು ಶಿಷ್ಯರಿದ್ದಂತೆ ತಿಳಿದುಬರುತ್ತದೆ. ಪದ್ಮನಾಭರು ಮಧ್ವಾಚಾರ್ಯರು ಬದರೀಪ್ರವೇಶ ಮಾಡಿದ ಏಳು ವರ್ಷಗಳ ಮೇಲೆ ಸಂನ್ಯಾಸವನ್ನು ಸ್ವೀಕರಿಸಿ ಏಳುವರ್ಷಗಳು ಆಸ್ಥಾನದಲ್ಲಿದ್ದರೆಂದೂ ಎರಡನೆಯ ನರಹರಿತೀರ್ಥರು ಅವರ ತರುವಾಯ ಒಂಭತ್ತು ವರ್ಷಗಳು ಸಂನ್ಯಾಸಿಗಳಾಗಿದ್ದರೆಂದೂ ಮೂರನೆಯವರೂ ನಾಲ್ಕನೆಯವರೂ ೧೭-೧೭ ವರ್ಷಗಳು ಮಠಾಧಿಪತಿಗಳಾಗಿದ್ದರೆಂದೂ ವಿಶದವಾಗಿ ತಿಳಿದುಬಂದಿವೆ. ಅಲ್ಲದೆ ನರಹರಿತೀರ್ಥರು ಕಳಿಂಗರಾಜ್ಯದಲ್ಲಿ ಕ್ರಿ.ಶ. ೧೨೧೫ ರ ವರೆಗೆ ಮಂತ್ರಿಯಾಗಿದ್ದರೆಂಬ ವಿಷಯವು ಶಾಸನದ ಆಧಾರದಿಂದ ನಿಶ್ಚಿತವಾಗಿದೆ. ಆದುದರಿಂದ ನರಹರಿತೀರ್ಥರು ಕ್ರಿ.ಶ. ೧೨೯೪ ರ ಮೇಲೆ ಮಧ್ವಾಚಾರ್ಯರ ಶಿಷ್ಯರಾಗಿರಬಹುದು. ಈ ಕಾಲದಲ್ಲಿ ಮಧ್ವಾಚಾರ್ಯರು ಜೀವಂತರಾಗಿದ್ದ ಪಕ್ಷದಲ್ಲಿ ಅವರು ಬದರೀಪ್ರವೇಶ ಮಾಡಿದರೆಂಬ ಐತಿಹ್ಯವಿರುವ ಪಿಂಗಳವರ್ಷವು ೧೩೧೭ರಲ್ಲಿ ಬರುವುದು. ಇದರ ಪ್ರಕಾರ ಗಣನೆಮಾಡಿದ ಪಕ್ಷದಲ್ಲಿ ಅಕ್ಷೋಭ್ಯಮುನಿಗಳು ೧೩೫೭ ರಲ್ಲಿ ಮಠಾಧಿಪತಿಗಳಾದರೆಂದು ತೋರುತ್ತದೆ. ಇವರು ಮಠಾಧಿಪತ್ಯಕ್ಕೆ ೧೩೫೭ರಲ್ಲಿ ಬಂದಿದ್ದರೂ ಅದಕ್ಕೆ ಮುಂಚೆಯೇ ದ್ವೈತಸಿದ್ಧಾಂತದಲ್ಲಿ ಗಟ್ಟಿಗರಾಗಿ ವಿದ್ಯಾರಣ್ಯರ ಜೊತೆಯಲ್ಲಿ

ಆ ವಾದದಲ್ಲಿ ಮಧ್ಯಸ್ಥರಾಗಿರಲು ವೇಂಕಟನಾಥರಿಗೆ ಆಹ್ವಾನವು ಬಂತು. ವೇಂಕಟನಾಥರು ವಿಜಯನಗರಕ್ಕೆ ಹೋಗಲು ಒಪ್ಪದಿರಲು ಆ ವಿದ್ವಾಂಸರು ತಮ್ಮ ವಾದಗ್ರಂಥಗಳನ್ನೇ ಅವರಲ್ಲಿಗೆ ತೀರ್ಮಾನಕ್ಕಾಗಿ ಕಳುಹಿಸಿ ಕೊಟ್ಟರು. ಆ ಗ್ರಂಥಗಳು ಈಗ ನಷ್ಟವಾಗಿವೆ. ವೇಂಕಟನಾಥರ ತೀರ್ಮಾನದ ವಿಷಯದಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಅದ್ವೈತಿಗಳು 'ಅಕ್ಷೋಭ್ಯಂ ಕ್ಷೋಭಯಾಮಾಸ ವಿದ್ಯಾರಣ್ಯೋ ಮಹಾಮುನಿಃ' ಎಂದರೆ ವಿದ್ಯಾರಣ್ಯಮಹಾಮುನಿಗಳು ಅಕ್ಷ್ಯೋಭ್ಯರನ್ನು ಸೋಲಿಸಿದರು ಎಂಬುದು ಆಚಾರ್ಯರ ತೀರ್ಪೆಂದು ಹೇಳುತ್ತಾರೆ. ದ್ವೈತಿಗಳಾದರೋ 'ಅಸಿನಾತತ್ತ್ವಮಸಿನಾ ಪರಜೀವಪ್ರಭೇದಿನಾ । ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್'[25] ಎಂದರೆ ತತ್ತ್ವಮಸಿ ಎಂಬ ಖಡ್ಗದಿಂದ ವಿದ್ಯಾರಣ್ಯರೆಂಬ ಮಹಾರಣ್ಯವನ್ನು ಅಕ್ಷೋಭ್ಯಮುನಿಗಳು ಕತ್ತರಿಸಿದರು ಎಂಬುದೇ ಆ ತೀರ್ಮಾನವೆಂದು ಹೇಳುತ್ತಾರೆ. ಇದು ಹೇಗಾದರೂ ಇರಲಿ. ಆಚಾರ್ಯರ ವೈದುಷ್ಯದಲ್ಲಿಯೂ ಅವರ ನಿಷ್ಪಕ್ಷಪಾತ ದೃಷ್ಟಿಯಲ್ಲಿಯೂ ಉಭಯ ವಿದ್ವಾಂಸರಿಗೂ ಪೂರ್ಣವಿಶ್ವಾಸವಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

---

ವಾಸವಾಗಿರಬಹುದು. ಆದುದರಿಂದ ೧೩೬೯ ನೆಯ ಸಂವತ್ಸರದವರೆಗೂ ಜೀವಂತರಾಗಿದ್ದ ಶ್ರೀವೇದಾಂತದೇಶಿಕರವರಿಗೆ ಅಕ್ಷೋಭ್ಯಮುನಿಗಳು ಸಮಕಾಲೀನರಾಗಿದ್ದರೆಂದು ನಿಸ್ಸಂದೇಹವಾಗಿ ಹೇಳಬಹುದು.

25 ಈ ಶ್ಲೋಕವು ಕೋಲಾರ ಡಿಸ್ಟ್ರಿಕ್ಟಿನ ಮುಳುಬಾಗಿಲು ಎಂಬ ಊರಿನ ಒಂದು ಶಿಲಾಶಾಸನದಲ್ಲಿದೆಯೆಂದು ಹೇಳುತ್ತಾರೆ. ಈ ವಿಷಯವನ್ನು ಪರೀಕ್ಷಿಸುವುದಕ್ಕಾಗಿ ಹೋಗಿದ್ದ ಮೈಸೂರಿನ ಶಾಸನದ ಇಲಾಖೆಯ ಅಧಿಕಾರಿಗಳು ಈ ಶ್ಲೋಕವು ಇತ್ತೆಂದು ಜನರು ತೋರಿಸುವ ಶಾಸನವು ಬಹು ಶಿಥಿಲವಾಗಿದೆಯೆಂದೂ ಅಲ್ಲಿ ಯಾವ ಬರವಣಿಗೆಯೂ ಕಾಣುವುದಿಲ್ಲವೆಂದೂ ಹೇಳುತ್ತಾರೆ.

## ಕೃಷ್ಣಮಿಶ್ರರು ಮತ್ತೂ ಡಿಂಡಿಮಕವಿ

ಇದೇ ಕಾಲದಲ್ಲಿ ಕೃಷ್ಣಮಿಶ್ರರೂ ಡಿಂಡಿಮಕವಿಯೂ ಶ್ರೀರಂಗಕ್ಕೆ ಬಂದು ವೇಂಕಟನಾಥರೊಂದಿಗೆ ವಾದಮಾಡಿದರೆಂಬುದೂ ಅವರನ್ನು ವೇಂಕಟನಾಥರು ಸೋಲಿಸಿದರೆಂಬುದೂ ಗುರುಪರಂಪರೆಯಲ್ಲಿಯೂ ವೈಭವಪ್ರಕಾಶಿಕೆಯಲ್ಲಿಯೂ ಈ ಕೆಳಗಿನ ಶ್ಲೋಕಗಳಲ್ಲಿಯೂ ಉಕ್ತವಾಗಿದೆ.

ಆಗಚ್ಛತ್ಕೃಷ್ಣಮಿಶ್ರಃ ಕತಿಪಯದಿವಸೈಃಸೋಽಪಿತಚ್ಛಿಷ್ಯಧುರ್ಯೈಃ
ಪ್ರಖ್ಯಾತೈರ್ವಾವದೂಕೈರಸಕೃದಪಿ ತಥಾ ದರ್ಪಸೌಧಾಗ್ರಸೀಮ್ನಃ ।
ವಿಭ್ರಂಶಂ ಲಮ್ಭಿತೋಽಭೂತ್ಪರಿಷದಿ ವಿದುಷಾಮುತ್ಸವೇ ರಙ್ಗಭರ್ತುಃ-
ಸ್ತಸ್ಮಾದಾಚಾರ್ಯವರ್ಯಾತ್ಪರಮವರಪದೇ ತೀರ್ಥಪೂಜಾಂ
ಸಪರ್ಯಾಂ ? ॥

ಆಗಚ್ಛಡ್ಡಿಣ್ಡಿಮಾಖ್ಯಃ ಕವಿರವನಿತಲೇ ನಿಸ್ತುಲೋತ್ರಪ್ರಸಿದ್ಧಃ
ಪ್ರತ್ಯಾಖ್ಯಾತಶ್ಚ ವಾದೈಃ ಪರಿಷದಿ ವಿದುಷಾಂ ದೇಶಿಕೇನೈಷ ಭೂಯಃ ।
ಪ್ರಾದಾತ್ಕ್ಷಿಪ್ರಂ ಸಮಸ್ಯಾದಶಕಮಪಿ ಚ ತಾನ್ಪೂರಯಾಮಾಸುಚೈತ-
ತ್ತಾವದ್ಭಿರ್ಲೇಖಯಿತ್ವಾ ಯುಗಪದವಿಕಲಂ ತತ್ಕ್ರಮಜ್ಞಃ ಸ ವೀರಃ ॥

ಕೃಷ್ಣಮಿಶ್ರರು ವಾದದಲ್ಲಿ ಪರಾಜಿತರಾಗಿ ತಮ್ಮ ಕವಿತಾಸಾಮರ್ಥ್ಯವನ್ನು ತೋರಿಸುವುದಕ್ಕಾಗಿ 'ಪ್ರಬೋಧಚಂದ್ರೋದಯ' ವೆಂಬ ಅದ್ವೈತಸಿದ್ಧಾಂತಸಮರ್ಥನೆಯ ವಿಷಯವಾದ ಆರು ಅಂಕಗಳುಳ್ಳ ನಾಟಕವೊಂದನ್ನು ವೇಂಕಟನಾಥರಿಗೆ ಅವಲೋಕನಸಕ್ಕಾಗಿ ಕೊಟ್ಟಂತೆಯೂ ಅದಕ್ಕೆ ಪ್ರತಿಯಾಗಿ ವೇಂಕಟನಾಥರು 'ಸಂಕಲ್ಪಸೂರ್ಯೋದಯ'ವೆಂಬ ಹತ್ತು ಅಂಕಗಳುಳ್ಳ ನಾಟಕವನ್ನು ರಚಿಸಿದಂತೆಯೂ ಪ್ರತೀತಿಯಿದೆ. ಆದರೆ ಐತಿಹಾಸಿಕದೃಷ್ಟಿಯಿಂದ ವಿಮರ್ಶಿಸಿದರೆ ಇದು ಅಸಂಭವವೆಂದು ತೋರುತ್ತದೆ. ಏಕೆಂದರೆ ಕೃಷ್ಣಮಿಶ್ರರು ಹನ್ನೊಂದು ಹನ್ನೆರಡನೆಯ ಶತಮಾನ

ದವರು [26]. ವೇಂಕಟನಾಥರು ಹದಿಮೂರು ಹದಿನಾಲ್ಕನೆಯ ಶತಮಾನದಲ್ಲಿದ್ದವರು. ಆದುದರಿಂದ ಬಹುಶಃ ಕೃಷ್ಣಮಿಶ್ರರ ಪ್ರಬೋಧಚಂದ್ರೋದಯ ನಾಟಕವನ್ನು ನೋಡಿ ವೇಂಕಟನಾಥರು 'ಸಂಕಲ್ಪಸೂರ್ಯೋದಯ'ವನ್ನು ರಚಿಸಿರಬೇಕು; ಅಥವಾ ಹನ್ನೆರಡನೆಯ ಶತಮಾನದಲ್ಲಿ ಪ್ರಭೋಧಚಂದ್ರೋದಯವು ರಚಿತವಾಗಿ ಪ್ರಸಿದ್ಧಿಗೆ ಬಾರದೆ ಇದ್ದು ಅದೇ ಹೆಸರಿನ ಮತ್ತೊಬ್ಬ ವಿದ್ವಾಂಸರು ಅದನ್ನು ತೆಗೆದುಕೊಂಡು ಬಂದು ವಾದವನ್ನು ಹೂಡಿರಬೇಕು. ಯಾವುದು ನಿಶ್ಚಯವೋ ಹೇಳುವದು ಕಷ್ಟವಾಗಿದೆ.

ಕೃಷ್ಣಮಿಶ್ರರು ಪರಾಜಿತರಾಗಿ ಹೊರಟುಹೋದಮೇಲೆ ಡಿಂಡಿಮ ಕವಿಯು ಶ್ರೀರಂಗಕ್ಕೆ ಬಂದು ತನ್ನ 'ರಾಮಾಭ್ಯುದಯ'ವೆಂಬ ಕಾವ್ಯವನ್ನು ವೇಕಂಟನಾಥರಿಗೆ ತೋರಿಸಿ ಸ್ಪರ್ಧೆಗೆ ಕರೆದನೆಂತಲೂ ಅವನನ್ನು ಸೋಲಿಸುವುದಕ್ಕಾಗಿ ಆಚಾರ್ಯರು 'ಯಾದವಾಭ್ಯುದಯ' ವೆಂಬ ಶ್ರೀಕೃಷ್ಣನ ವಿಷಯವಾದ ಇಪ್ಪತ್ತುನಾಲ್ಕು ಸರ್ಗಗಳುಳ್ಳ ಮಹಾಕಾವ್ಯವೊಂದನ್ನು ರಚಿಸಿ ಅವನನ್ನು ಸೋಲಿಸಿದರೆಂತಲೂ ಎಲ್ಲಾ ಆಧಾರಗಳೂ ಹೇಳುವುವು. ಈ ವಿಷಯವು ಅಸಂಭವವಿರಲಾರದು. ಏಕೆಂದರೆ ಡಿಂಡಿಮ ಎಂಬುವುದು ಒಬ್ಬ ಮನುಷ್ಯನ ಹೆಸರಲ್ಲ. ಯಾವುದೋ ಕವಿಗಳ ವಂಶದ ಹೆಸರು. ದಕ್ಷಿಣಭಾರತದ ಸಾಹಿತ್ಯ ಪ್ರಪಂಚದಲ್ಲಿ ನಾಲ್ಕು ಜನ ಡಿಂಡಿಮರಿದ್ದರೆಂಬ ವಿಷಯವು ಇತಿಹಾಸಪರಿಶೋಧನೆಯಿಂದ ತಿಳಿದು ಬಂದಿದೆ. ವಿಜಯನಗರದ ಅರಸಾದ ಅಚ್ಯುತರಾಯನ ವಿಷಯವಾದ 'ಅಚ್ಯುತರಾಯಾಭ್ಯುದಯ'ವನ್ನು ಬರೆದ ರಾಜನಾಥಡಿಂಡಿಮನೊಬ್ಬನು; ಸಾಳ್ವನರಸಿಂಹನ ವಿಷಯವಾದ 'ಸಾಳ್ವಾಭ್ಯುದಯ'ಕರ್ತೃವಾದ ರಾಜನಾಥಡಿಂಡಿಮನು ಮತ್ತೊಬ್ಬನು. ಎರಡನೆಯ ದೇವರಾಯನ ಸಮಕಾಲೀನನಾದ ಅರುಣಗಿರಿನಾಥನೆಂಬ ಹೆಸರುಳ್ಳ 'ಸೋಮವಲ್ಲೀಯೋಗಾ

---

26 ಕೃಷ್ಣಮಿಶ್ರರ ಕಾಲನಿರ್ಣಯದ ವಿಷಯದಲ್ಲಿ ವೀಬರ್ ಮತ್ತು ಮೆಕ್ಡೊನೆಲ್ ಎಂಬ ಪಂಡಿತರುಗಳು ಬರೆದಿರತಕ್ಕ ಸಂಸ್ಕೃತಸಾಹಿತ್ಯಚರಿತ್ರೆಗಳನ್ನು ನೋಡಿ.

ನಂದಂ' ಎಂಬ ಪ್ರಹಸನವನ್ನು ರಚಿಸಿದ ಡಿಂಡಿಮನು ಮೂರನೆಯವನು. ವೇಂಕಟನಾಥರೊಡನೆ ವಾದವನ್ನು ನಡೆಸಿದವನು ನಾಲ್ಕನೆಯವನು. ಇವನು ಇತರ ಡಿಂಡಿಮ ಕವಿಗಳ ಪೂರ್ವಜನಾಗಿರಬಹುದು.

ಶ್ರೀರಂಗದಲ್ಲಿ ವಾಸವಾಗಿದ್ದುಕೊಂಡು ಅಲ್ಲಿಗೆ ಬಂದ ಅನ್ಯ ಮತೀಯರಾದ ಎಲ್ಲ ವಿದ್ವಾಂಸರುಗಳನ್ನೂ ಸೋಲಿಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ವಿಶೇಷವಾಗಿ ಅಭಿವೃದ್ಧಿಗೆ ತಂದುದರಿಂದ ಶ್ರೀರಂಗನಾಥ ದೇವರು ಆಚಾರ್ಯರಿಗೆ 'ವೇದಾಂತಾಚಾರ್ಯ' ರೆಂಬ ಬಿರುದನ್ನೂ ಶ್ರೀ ಅಮ್ಮ ನವರು 'ಸರ್ವತಂತ್ರಸ್ವತಂತ್ರ' ಎಂಬ ಬಿರುದನ್ನೂ ಅರ್ಚಕಮುಖೇನ ದಯಪಾಲಿಸಿದರೆಂಬ ಪ್ರತೀತಿಯಿದೆ. ಇದೇ ವಿಷಯವನ್ನು ಆಚಾರ್ಯರು ತಮ್ಮ 'ಸಂಕಲ್ಪಸೂರ್ಯೋದಯ' ದ ನಾಂದೀಪದ್ಯದಲ್ಲಿ 'ಶ್ರೀರಂಗರಾಜ ದಿವ್ಯಾಜ್ಞಾಲಬ್ಧವೇದಾನ್ತಾಚಾರ್ಯಪದಃ' ಎಂಬುದಾಗಿ ಹೇಳಿಕೊಂಡಿ ರುವರು. ಅವರ 'ಅಧಿಕರಣಸಾರಾವಳಿ' ಯ ಪ್ರಾರಂಭಶ್ಲೋಕದಲ್ಲಿಯೂ ಈ ವಿಷಯವು ಉಕ್ತವಾಗಿದೆ. 'ವೈಭವಪ್ರಕಾಶಿಕೆ' ಮತ್ತು 'ಸಪ್ತತಿ ರತ್ನಮಾಲಿಕೆಗಳು' ಈ ಅಂಶವನ್ನು ಸ್ಪಷ್ಟೀಕರಿಸುವುವು. ಈಗಲೂ ವೇಂಕಟನಾಥರಿಗೆ ವೇದಾಂತದೇಶಿಕರೆಂಬುವೇ ಪ್ರಸಿದ್ಧವಾಗಿರುವ ಹೆಸರು. ಇವರಿಗೆ 'ಕವಿತಾರ್ಕಿಕಸಿಂಹ' ಎಂಬ ಬಿರುದೂ ಉಂಟು.

ಹೀಗೆ ಆಚಾರ್ಯರು ತಮ್ಮ ಅದ್ಭುತವಾದ ಪ್ರತಿಭೆಯಿಂದಲೂ ಅಗಾಧವಾದ ಪಾಂಡಿತ್ಯದಿಂದಲೂ ಪ್ರತಿದಿವಸವೂ ಪರವಾದಿಗಳನ್ನು ಜಯಿಸಿ ಹೊಸಹೊಸ ಬಿರುದುಗಳಿಂದ ಮಹಾ ಖ್ಯಾತಿವಂತರಾದುದು ಅನೇಕರಿಗೆ ಸಹಿಸಲಿಲ್ಲ. ಅವರು ಆಚಾರ್ಯರನ್ನು ಅವಮಾನಪಡಿಸಬೇಕೆಂದು ಹಾವಾಡಿಗನನ್ನೂ ಇಂದ್ರಜಾಲದವನನ್ನೂ ಗಾರೆಯಕೆಲಸದವನನ್ನೂ ಬೇರೆಬೇರೆ ಕಾಲದಲ್ಲಿ ಅವರಲ್ಲಿಗೆ ಕಳುಹಿಸಿ ತೊಂದರೆಪಡಿಸಿದರೆಂದೂ ಆಚಾರ್ಯರು ಅವರನ್ನೆಲ್ಲಾ ಭಗವತ್ಕೃಪೆಯಿಂದ ಜಯಿಸಿ ತಮ್ಮ ಸರ್ವ ತಂತ್ರಸ್ವತಂತ್ರ ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡರೆಂದೂ ಆಚಾರ್ಯರ ವಿಷಯವಾದ ಗ್ರಂಥಗಳೆಲ್ಲಾ ಏಕವಾಕ್ಯದಿಂದ ಹೇಳಿವೆ.

# ಪಾದುಕಾಸಹಸ್ರದ ರಚನೆ

ಈ ಕಾಲದಲ್ಲಿ ದಕ್ಷಿಣಶಾಖೆ (ಪ್ರಬಂಧಶಾಖೆ)ಯ ಗುರುಗಳಾಗಿದ್ದವರು ಪಿಳ್ಳೈಲೋಕಾಚಾರ್ಯರು[27] ಮತ್ತು ಇವರ ತಮ್ಮಂದಿರಾದ ಅಳಗಿಯಮಣವಾಳ ಪೆರುಮಾಳ್‌ನಾಯಿನಾರ್ ಎಂಬ ಇಬ್ಬರು ಮಹಾತ್ಮರು. ಇವರುಗಳು ಆಚಾರ್ಯರನ್ನು ಪ್ರತಿಭಟಿಸಿ ಅವರಿಗೆ ತಮಿಳು ಪ್ರಬಂಧಗಳನ್ನು ರಚಿಸಲು ಶಕ್ತಿಯಿಲ್ಲವೆಂದೂ ತಮಿಳಿನಲ್ಲಿ ಸ್ಪರ್ಧೆಯೊಂದನ್ನು ಏರ್ಪಡಿಸಬೇಕೆಂದೂ ಹೇಳಿಕಳುಹಿಸಿದರು. ಅದಕ್ಕೆ ಆಚಾರ್ಯರು ತಮಿಳಿನಲ್ಲಿ ತಾವು ರಚಿಸಿದ್ದ ದೇಶಿಕಪ್ರಬಂಧಗಳೆಂಬುದಾಗಿ ಪ್ರಸಿದ್ಧಿಯಾಗಿರುವ ತಮಿಳು ಗ್ರಂಥಗಳನ್ನು ಕಳುಹಿಸಿಕೊಟ್ಟು ರಾಮಾನುಜಾಚಾರ್ಯರ ಶಿಷ್ಯರಾದ ಉಭಯಕಲೆಯವರಲ್ಲಿ ವಿದ್ವೇಷವಿರಕೂಡದೆಂದೂ ತಮ್ಮ ತಮ್ಮ ಅಂತಃಕಲಹದಿಂದ ರಾಮಾನುಜಸಿದ್ಧಾಂತಕ್ಕೇ ಘಾತವಾಗಬಹುದೆಂದೂ ಸಮಾಧಾನಹೇಳಿ ಕಳುಹಿಸಿದರು. ಇಷ್ಟರಿಂದ ಪ್ರತಿಪಕ್ಷದವರಿಗೆ ಸಮಾಧಾನವಾಗಲಿಲ್ಲ. ಇದನ್ನು ಆಚಾರ್ಯರ ಅಶಕ್ತಿಯೆಂದು ಭಾವಿಸಿ ಒಂದು ದಿನ ರಂಗನಾಥಸ್ವಾಮಿಯವರ ದೇವಾಲಯಕ್ಕೆ ಅವರು ದಯಮಾಡಿಸಿದ್ದಾಗ ಅಳಗಿಯಮಣವಾಳನಾಯರ್ ಅವರು ಅವರನ್ನು ಸ್ಪರ್ಧೆಗೆ ಕರೆದು ಆ ರಾತ್ರಿ ರಂಗನಾಥನ ವಿಷಯವಾಗಿ ತಮ್ಮಿಬ್ಬರಲ್ಲಿ ಒಂದು ಸಾವಿರ ಶ್ಲೋಕಗಳನ್ನು ರಚಿಸತಕ್ಕವರಿಗೆ ಮಾತ್ರ ಕವಿತಾರ್ಕಿಕಸಿಂಹ ಎಂಬ ಬಿರುದು ಸಲ್ಲತಕ್ಕುದೆಂದೂ, ಆ ಶಕ್ತಿಯಿಲ್ಲವಾದರೆ ಆ ಪ್ರಶಸ್ತಿಯನ್ನು ತ್ಯಜಿಸಬೇಕೆಂದೂ ಹಠ

---

27 ಇವರು ಮಣಿಪ್ರವಾಳದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಇವರು 'ಶ್ರೀವಚನಭೂಷಣ' 'ಆಚಾರ್ಯಹೃದಯ' ಎಂಬುವನ್ನೂ ಅಷ್ಟಾದಶರಹಸ್ಯಗಳೆಂಬುದಾಗಿ ಪ್ರಸಿದ್ಧಿಯಾಗಿರುವ 'ತನಿತಿರುಮನ್ತ್ರಮ್' 'ಸಿಗಮುಸಪ್ಪಡಿ' 'ಮುಮುಕ್ಷುಪ್ಪಡಿ' 'ಅರ್ಥಪಂಚಕಮ್' 'ನವರತ್ನಮಾಲೈ' 'ತನಿಪ್ರಣವಮ್' 'ತನಿದ್ವಯಮ್' 'ತನಿಚ್ಚರಮಮ್' 'ತತ್ತ್ವಶೇಖರಮ್' 'ಸಂಸಾರಸಾಮ್ರಾಜ್ಯಮ್' ಮೊದಲಾದವನ್ನು ರಚಿಸಿದ್ದಾರೆ. ಇವೆಲ್ಲವೂ ದಕ್ಷಿಣಪಂಗಡದ ಸಿದ್ಧಾಂತವನ್ನು ಸಮರ್ಥಿಸುತ್ತವೆ.

ಹಿಡಿವರು. ಸುವಿನೀತರಾದ ಆಚಾರ್ಯರು ಭಾಗವತತೇಜೋಭಂಗವನ್ನು ಮಾಡುವುದಕ್ಕಿಂತ ತಮ್ಮ ಬಿರುವನ್ನು ಬಿಟ್ಟುಬಿಡುವುದೇ ಲೇಸೆಂದು ಭಾವಿಸಿದರು. ಆದರೆ ವಿದ್ವತ್ಪಕ್ಷಪಾತಿಗಳಾದ ಶ್ರೀರಂಗದ ಮಹಾಜನರು ಇದಕ್ಕೆ ಒಡಂಬಡದೆ ಸ್ಪರ್ಧೆಗೆ ಒಪ್ಪಿಕೊಳ್ಳಬೇಕೆಂದು ಬೇಡಿಕೊಳ್ಳಲು ಅವರ ಇಚ್ಛಾನುಸಾರ ಸಮ್ಮತಿಸಿದರು. ಮಾರನೆಯ ದಿವಸ ಬೆಳಿಗ್ಗೆ ರಂಗನಾಥ ಸ್ವಾಮಿಯವರ ಸನ್ನಿಧಿಯಲ್ಲಿ ಇಬ್ಬರೂ ತಮ್ಮ ಕವಿತೆಗಳನ್ನು ಓದಿದರು. ದೇಶಿಕರು ರಂಗನಾಥಪಾದುಕೆಯಮೇಲೆ 'ಪಾದುಕಾಸಹಸ್ರ' ವೆಂಬ ಒಂದುಸಾವಿರದ ಎಂಟು ಶ್ಲೋಕಗಳನ್ನು ರಚಿಸಿದರು. ನಾಯಿನಾರ್ರವರು ಪ್ರಾರಂಭಿಸಿದ 'ಪದಕಮಲಸಹಸ್ರ'[28] ವೆಂಬ ಗ್ರಂಥದಲ್ಲಿ ಮುನ್ನೂರು ಶ್ಲೋಕಗಳು ಮಾತ್ರ ಪೂರ್ಣವಾಗಿದ್ದುದರಿಂದ ದೇಶಿಕರಿಗೇ ಕವಿತಾರ್ಕಿಕಸಿಂಹ ಎಂಬ ಬಿರುದು ಸಲ್ಲತಕ್ಕದೆಂದು ತೀರ್ಮಾನವಾಯಿತು. ಆದರೆ ಸಜ್ಜನರ ಮನಸ್ಸನ್ನು ನೋಯಿಸಬಾರದೆಂಬ ಸ್ವಭಾವವುಳ್ಳ ಆಚಾರ್ಯರು ಅದೇ ಸಭೆಯಲ್ಲಿ ನೈಚ್ಯಾನುಸಂಧಾನವನ್ನು ಮಾಡಿಕೊಂಡು ಎರಡು ಕವಿತೆಗಳ ವಿಷಯದಲ್ಲಿಯೂ ಹೀಗೆ ಹೇಳಿದರಂತೆ :—

**ಸೂತೇ ಸೂಕರಯುವತಿಃ ಸುತಶತಮತ್ಯನ್ತದುರ್ಭಗಂ ಝಡಿತಿ ।**
**ಕರಿಣೀ ಚಿರಾಯುಸೂತೇ ಸಕಲಮಹೀಪಾಲಲಾಲಿತಂ ಕಳಭಮ್ ॥**

(ಅಲ್ಪಕಾಲದಲ್ಲಿಯೇ ಹೆಣ್ಣುಹಂದಿಯು ನೂರುಮರಿಗಳನ್ನಾದರೂ ಹಾಕುವುದು. ಆನೆಯಾದರೋ ದೀರ್ಘಕಾಲ ಗರ್ಭವನ್ನು ಧರಿಸಿ ಸಕಲಭೂಪತಿಗಳಿಂದ ಸನ್ಮಾನಿಸಲ್ಪಡುವ ಒಂದು ಆನೆಯ ಮರಿಯನ್ನು ಹಾಕುತ್ತದೆ.) ಹೀಗೆಂದು ಹೇಳಿ ತಮ್ಮ 'ಪಾದುಕಾಸಹಸ್ರ'ಕ್ಕಿಂತ 'ಪದಕಮಲಸಹಸ್ರ'ವೇ ಉತ್ತಮವೆಂದು ಹೊಗಳಿರುವರು. ಅಲ್ಲದೇ ಉಭಯಕಲೆಯವರಿಗೆ ಕಲಹವಿಲ್ಲದಿರುವಂತೆ ಅನುಗ್ರಹಿಸಬೇಕೆಂದು ಪಾದುಕಾಸಹಸ್ರದ ಕೊನೆಯಲ್ಲಿ ಶ್ರೀರಂಗನಾಥನನ್ನು ಹೀಗೆಂದು ಪ್ರಾರ್ಥಿಸಿದ್ದಾರೆ :—

28. ಇದು ಉಪಲಬ್ಧವಲ್ಲ.

ಆಪಾದಚೂಡಮನಪಾಯಿನಿ ದರ್ಶನೇಽಸ್ಮಿನ್
ಆಶಾಸನೀಯಮಪರಂ ನ ವಿಪಕ್ಷಹೇತೋಃ ।
ಆಪಾತಶಾಂತಿಮಧುರಾನ್ ಪುನರಸ್ಮದೀಯಾನ್
ಅನ್ಯೋನ್ಯವೈರಜನನೀ ವಿಜಹಾತ್ವಸೂಯಾ ॥

(ಅತ್ಯಂತವಾಗಿ ಪ್ರಶಸ್ತವಾಗಿರುವ ರಾಮಾನುಜಸಿದ್ಧಾಂತವನ್ನು ಪ್ರತಿಪಕ್ಷದವರೂ ಖಂಡಿಸುವಹಾಗಿಲ್ಲ. ಅದರ ವಿಚಾರವಾಗಿ ಪ್ರಾರ್ಥಿಸಬೇಕಾದುದೇನೂ ಇಲ್ಲ. ಆದರೆ ನಮ್ಮಲ್ಲಿಯೇ ಒಬ್ಬೊಬ್ಬರಿಗೂ ವೈರವನ್ನುಂಟುಮಾಡುವ ಅಸೂಯೆಯು ನಮ್ಮನ್ನು ಬಿಡಲಿ.) ಇದಾದಮೇಲೆ ಪ್ರತಿಪಕ್ಷದಾಚಾರ್ಯರು ದೇಶಿಕರೊಡನೆ ಸೌಹಾರ್ದದಿಂದ ವರ್ತಿಸಿದಂತೆ ಕಾಣುತ್ತದೆ.

## ದ್ರಾವಿಡ ಪ್ರಬಂಧಗಳ ರಚನೆ

ಪ್ರತಿಪಕ್ಷದವರ ವಾದಗಳೆಲ್ಲವೂ ಆಚಾರ್ಯರಿಗೆ ಪ್ರಯೋಜನಕಾರಿಯಾಗಿಯೇ ಪರಿಣಮಿಸಿದುವು. ಗಟ್ಟಿಗರಾದ ಎದುರಾಳಿಗಳನ್ನು ಸೋಲಿಸಲು ಪ್ರತಿದಿನವೂ ಹೊಸಹೊಸ ವಿಷಯಗಳನ್ನು ಮನನಮಾಡಿ ಸಕಲಶಾಸ್ತ್ರಪಾರಂಗತರಾದರು. ಪ್ರತಿಪಕ್ಷದವರನ್ನು ಸೋಲಿಸಬೇಕಾದರೆ ಅವರು ಯಾವಭಾಗದಲ್ಲಿ ಪಂಡಿತರೆಂದು ತಿಳಿದುಕೊಂಡಿರುವರೋ ಆ ಭಾಗದಲ್ಲಿ ತಾವೂ ತಮ್ಮ ಪಾಂಡಿತ್ಯವನ್ನು ತೋರಿಸುವುದು ಆವಶ್ಯಕವೆಂದು ಅವರಿಗೆ ತೋರಿಬಂದುದರಿಂದ ಅವರಂತೆ ತಾವೂ ಅನೇಕ ದ್ರಾವಿಡ ಪ್ರಬಂಧಗಳನ್ನು ರಚಿಸಿದರು.[29] ತಿರುಪ್ಪಾಣಾಳ್ವಾರರು ರಚಿಸಿದ ‘ಅಮಲನಾಧಿಪಿರಾ’

---

29. ವೇಂಕಟನಾಥರು ಶಠಕೋಪರ ತಿರುವಾಯ್ಮೊಳಿಗೆ ಆ ಕಾಲಕ್ಕೆ ಹಿಂದೆ ಇದ್ದ ‘ಆರಾಯಿರಪ್ಪಡಿ’ ‘ಒಂಬದನಾಯಿರಪ್ಪಡಿ’ ‘ಮುಪ್ಪತ್ತಾರಾಯಿರಪ್ಪಡಿ’ ಎಂಬ ವ್ಯಾಖ್ಯಾನಗಳೆಲ್ಲಕ್ಕಿಂತಲೂ ವಿಸ್ತಾರವಾದ ವ್ಯಾಖ್ಯಾನವನ್ನು ರಚಿಸಬೇಕೆಂದು ಹೊರಟು ಇಪ್ಪತ್ತನಾಲ್ಕು ಸಾವಿರ ಗ್ರಂಥಸಂಖ್ಯೆಯುಳ್ಳ ‘ನಿಗಮಪರಿಮಳಂ’ ಎಂಬ ತಮಿಳು ವ್ಯಾಖ್ಯಾನವನ್ನು ರಚಿಸಿದರೆಂದು ಪ್ರತೀತಿ ಇದೆ. ಇದು ಉಪಲಬ್ಧವಾಗಿಲ್ಲ. ಇದರ ವಿಷಯವಾಗಿ ಆಚಾರ್ಯರು ತಮ್ಮ ಇತರ ಯಾವ ಗ್ರಂಥಗಳಲ್ಲಿಯೂ ಉಲ್ಲೇಖಿಸಿಲ್ಲವಾಗಿ ಇದನ್ನು ನಂಬುವುದು ಕಷ್ಟವಾಗಿದೆ.

ಎಂಬ ದ್ರಾವಿಡಪ್ರಬಂಧಕ್ಕೆ 'ಮುನಿವಾಹನಭೋಗವೆಂಬ' ವ್ಯಾಖ್ಯಾನವನ್ನೂ ಮಧುರಕವಿಯಾಳ್ವಾರ್ರವರ 'ಕಣ್ಣಿನುಣ್‌ಶಿರುತ್ತಾಂಬು' ಎಂಬ ಪ್ರಬಂಧಕ್ಕೆ 'ಮಧುರಕವಿಹೃದಯ'[30] ವೆಂಬ ವ್ಯಾಖ್ಯಾನವನ್ನೂ ರಚಿಸಿದರು. ಶಠಕೋಪಮಹಾಮುನಿಗಳ 'ತಿರುವಾಯ್ಮೊಳಿ'ಯ ಸಾರವನ್ನು ಸಂಗ್ರಹಿಸಿ 'ದ್ರಮಿಡೋಪನಿಷತ್ಸಾರ' ಮತ್ತು 'ದ್ರಮಿಡೋಪನಿಷತ್ತಾತ್ಪರ್ಯರತ್ನಾವಳಿ' ಎಂಬ ಎರಡು ಸಂಸ್ಕೃತ ಗ್ರಂಥಗಳನ್ನೂ ಅನುಗ್ರಹಿಸಿದರು.

ಆಚಾರ್ಯರು ಶ್ರೀರಂಗದಲ್ಲಿದ್ದ ಕಾಲದಲ್ಲಿಯೇ ಉತ್ತರದೇಶದ ದೊರೆಯಾದ **ಸರ್ವಜ್ಞಶಿಂಗಪ್ಪ**[31] ನೆಂಬುವನು ಕೆಲವು ಶ್ರೀವೈಷ್ಣವರನ್ನು

---

30 ಇದು ಉಪಲಬ್ಧವಲ್ಲ.

31 ವೈಭವಪ್ರಕಾಶಿಕೆಯಲ್ಲಿ ಸರ್ವಜ್ಞಶಿಂಗಪ್ಪನು ಏಕಶಿಲಾನಗರಿಯ ರಾಜಮಹೇಂದ್ರಪಟ್ಟಣದ ಮಾಧವನಾಯಕನ ಮಗನೆಂದು ಹೇಳಿದೆ. ಕಡಪಜಿಲ್ಲೆಯ ಒಂಟಿಮಿಟ್ಟಿಯೆಂಬ ಊರೇ ಏಕಶಿಲಾನಗರವೆಂದೂ ಇದು ವೆಂಕಟಗಿರಿ ಸಂಸ್ಥಾನಕ್ಕೆ ಸೇರಿತ್ತೆಂದೂ ಈ ಸಂಸ್ಥಾನಕ್ಕೆ ಸರ್ವಜ್ಞಶಿಂಗಪ್ಪನು ರಾಜನಾಗಿದ್ದನೆಂದೂ ಕೆಲವರು ಹೇಳುತ್ತಾರೆ. ವಿರೇಶಲಿಂಗಮ್ ಪಂತಲು ಅವರು ಈ ಶಿಂಗಪ್ಪನು ಆ ವಂಶದ ಮೂಲಪುರುಷನಾದ ಬೇತಾಳನಾಯಿಡು ಅಥವಾ ಶೆವಿರೆಡ್ಡಿ ಎಂಬುವನಿಂದ ಹತ್ತನೆಯ ತಲೆಮೊರೆಯುವನೆಂದು ಹೇಳುತ್ತಾರೆ. ಅಲ್ಲದೆ ಶಿಂಗಪ್ಪನು 'ಚಮತ್ಕಾರಚಂದ್ರಿಕಾ' ಅಥವಾ 'ಶಿಂಗಭೂಪಾಲಿಯಮ್' ಎಂಬ ಗ್ರಂಥವನ್ನು ರಚಿಸಿರುವಂತೆ ಪ್ರತೀತಿ ಇದೆ. ರಾವ್ ಬಹದ್ದೂರ್ ಹೆಚ್. ಕೃಷ್ಣಶಾಸ್ತ್ರಿಗಳು ವೇಂಕಟನಾಥರ ಶಿಷ್ಯನಾದ ಶಿಂಗಪ್ಪನು ವೆಂಕಟಗಿರಿಯವನಲ್ಲನೆಂದೂ ಕುರುಕೊಂಡದ ಮುಮ್ಮಡಿನಾಯಕನ ತಮ್ಮ ಶಿಂಗನಾಯಕನೆಂದು ಹೇಳುತ್ತಾರೆ. (ಮದ್ರಾಸ್ ಶಾಸನದ ಇಲಾಖೆಯ ವರದಿ ೧೯೧೪ ಪು. ೧೨೯-೧೩೦) ಆದರೆ ಪಂತಲು ಅವರು ಕೊಂಡವೀಡು, ರಾಜಮಹೇಂದ್ರಿ, ವೆಂಕಟಗಿರಿ ಈ ಮೂರು ಸಂಸ್ಥಾನಗಳಿಗೂ ವೈವಾಹಿಕ ಸಂಬಂಧವಿತ್ತೆಂದೂ ವೆಂಕಟಗಿರಿಯು ರಾಜಮಹೇಂದ್ರಿಯ ಭಾಗವೇ ಎಂದೂ ಹೇಳಿದ್ದಾರೆ. ಇನ್ನು ಕೆಲವರು ಸರ್ವಜ್ಞಶಿಂಗಪ್ಪನು ಓರಗಲ್ಲಿನ (ಏಕಶಿಲಾನಗರ) ಕಾಕತೀಯರ ಅಧೀನರಾಜನೆಂದೂ ಪಂತಲು ಅವರ ಅಭಿಪ್ರಾಯವು ಸರಿಯಲ್ಲವೆಂದೂ ಸಿದ್ಧಾಂತಮಾಡಲು ಪ್ರಯತ್ನಿಸಿದ್ದಾರೆ. ಇದೇ ಸರಿಯೆಂದು ಹೇಳಲು ಸಾಕಾದಷ್ಟು ಸಾಧನಗಳು ಸಿಕ್ಕಿಲ್ಲ.

ಶ್ರೀಮದಾಚಾರ್ಯರಲ್ಲಿಗೆ ಕಳುಹಿಸಿ ತನ್ನ ದೇಶಕ್ಕೆ ದಯಮಾಡಿಸಿ ತನಗೆ ವಿಶೇಷಾರ್ಥಗಳನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದನು. ಶಿಂಗಪ್ಪನಾರೆಂಬುದು ಯಾವಗ್ರಂಥಗಳಿಂದಲೂ ನಿರ್ದಿಷ್ಟವಾಗಿ ಗೊತ್ತಾಗುವಹಾಗಿಲ್ಲ. ಅವನ ವಂಶಪರಂಪರೆಯಿಂದಲೂ ಅವನ ಬಿರುದುಗಳಿಂದಲೂ ಅವನು ವೆಂಕಟಗಿರಿಯ ರಾಜಮನೆತನಕ್ಕೆ ಸೇರಿದವನೆಂದು ಊಹಿಸಬಹುದು. ಸರ್ವಜ್ಞನೆಂಬ ಅವನ ವಿಶೇಷಣವನ್ನು ನೋಡಿದರೆ ಅವನು ವಿದ್ಯಾವಂತನಾಗಿಯೂ ಕಲಾಸಾಹಿತ್ಯಗಳಿಗೆ ವಿಶೇಷ ಪ್ರೋತ್ಸಾಹವನ್ನಿತ್ತವನಾಗಿಯೂ ಕಾಣುತ್ತದೆ. ಈ ಶಿಂಗಪ್ಪನಿಗೂ ಆಚಾರ್ಯರಿಗೂ ಯಾವಾಗ ಪರಿಚಯವಾಯಿತೆಂಬುದೂ ಯಾವ ಗ್ರಂಥಗಳಿಂದಲೂ ತಿಳಿಯುವಂತಿಲ್ಲ. ಆತನಲ್ಲಿ ಆಚಾರ್ಯರಿಗೆ ವಿಶೇಷ ಅಭಿಮಾನವಿತ್ತೆಂದು ಮಾತ್ರ ಧೈರ್ಯವಾಗಿ ಹೇಳಬಹುದು. ತಾವೇ ಸ್ವತಃ ಅವನ ದೇಶಕ್ಕೆ ಹೋಗುವುದಕ್ಕೆ ಸಾಧ್ಯವಿಲ್ಲದುದರಿಂದ ಅವನ ಉಪಯೋಗಕ್ಕಾಗಿ 'ಸುಭಾಷಿತನೀವೀ' ಎಂಬ ನೀತಿಗ್ರಂಥವನ್ನೂ 'ತತ್ತ್ವಸಂದೇಶ' 'ರಹಸ್ಯಸಂದೇಶ' 'ತತ್ತ್ವಸಂದೇಶವಿವರಣೆ' 'ರಹಸ್ಯಸಂದೇಶವಿವರಣೆ' ಎಂಬ ತತ್ತ್ವಗ್ರಂಥಗಳನ್ನು ರಚಿಸಿ ಕಳುಹಿಸಿಕೊಟ್ಟರು. ಶಿಂಗಪ್ಪನು ಅವುಗಳನ್ನು ಭಕ್ತಿಯಿಂದ ಬರಮಾಡಿಕೊಂಡು ಪ್ರತಿದಿನವೂ ಆ ಉಪದೇಶಗಳನ್ನು ಕಾಲಕ್ಷೇಪಮಾಡುತ್ತಿದ್ದನು.

## ಶ್ರೀ ನಯನಾಚಾರ್ಯರ ಜನನ

ಈ ಮಧ್ಯೆ ಆಚಾರ್ಯರಿಗೆ ಕಲಿಯುಗ ವರ್ಷಗಳು ೪೪೧೮ನೆಯ ನಳಸಂವತ್ಸರದ ಸಿಂಹಮಾಸ ಬುಧವಾರ ರೋಹಿಣೀ ನಕ್ಷತ್ರಕ್ಕೆ ಸರಿಯಾದ ಕ್ರಿ.ಶ. ೧೩೧೬ನೇ ಇಸ್ವಿ ಆಗಸ್ಟು ೧೧ನೇ ತಾರೀಖಿನದಿನ ವರದಾಚಾರ್ಯ (ನಯನಾರ್) ರೆಂಬ ಕುಮಾರರುದಯಿಸಿದರು. ಇವರು 'ಪಿತುಸ್ಸತಗುಣಂ ಪುತ್ರಃ' ಎಂಬಂತೆ ತಂದೆಗಿಂತ ಅಧಿಕ ಮೇಧಾವಿಯಾಗಿ ಬಾಲ್ಯದಲ್ಲಿಯೇ ವಿದ್ಯಾಭ್ಯಾಸವನ್ನು ಮುಗಿಸಿ ಭಾಷ್ಯಕಾಲಕ್ಷೇಪಕ್ಕೆ ಪ್ರಾರಂಭಿಸಿ ಪ್ರಸಿದ್ಧಿಯಿಂದ

ವ್ಯಾಸಂಗಮಾಡಿ ಪೂರ್ಣಪಾಂಡಿತ್ಯವನ್ನು ಸಂಪಾದಿಸಿದರು. ಇವರ ಅನ್ಯಾದೃಶವಾದ ಪ್ರತಿಭೆಯು ಅನೇಕರನ್ನು ಇವರ ಶಿಷ್ಯರನ್ನಾಗಿ ಮಾಡಿತು. ಆ ಕಾಲದ ಉದ್ದಾಮಪಂಡಿತರೂ ಕೂಡ ಇವರಲ್ಲಿ ಗ್ರಂಥಕಾಲಕ್ಷೇಪವನ್ನು ಮಾಡಿದರೆಂಬುದಕ್ಕೆ ಪೂರ್ಣ ಆಧಾರಗಳಿವೆ.

## ಸತ್ಯಮಂಗಲಕ್ಕೆ ಪ್ರಯಾಣ

ವೇಂಕಟನಾಥರ ವೈಭವಗಳನ್ನು ನೋಡಿ ಅವರ ನಿರ್ಹೇತುಕ ಶತ್ರುಗಳು ಸಹಿಸಲಾರದವರಾದರು. ಅವರ ಕಿರುಕುಳಗಳು ಹೆಚ್ಚುತ್ತಾ ಬಂದುವು. ಹೇಗಾದರೂ ಮಾಡಿ ಆಚಾರ್ಯರಿಗೆ ಅವಮಾನಮಾಡಬೇಕೆಂಬುದೂ ಅವರನ್ನು ಶ್ರೀರಂಗದಿಂದ ಹೊರಡಿಸಬೇಕೆಂಬುದೂ ಅವರ ಮುಖ್ಯೋದ್ದೇಶವಾಗಿತ್ತು. ಇದಕ್ಕಾಗಿ ಅವರು ಅನೇಕವಿಧದಲ್ಲಿ ಆಚಾರ್ಯರಿಗೆ ಉಪದ್ರವಮಾಡಲು ಮೊದಲುಮಾಡಿದರು. ಒಂದುದಿನ ಆಚಾರ್ಯರು ಮನೆಯ ಮುಂಜಗಲಿಯ ಮೇಲೆ ಕುಳಿತು ಶಿಷ್ಯರಿಗೆ ಪಾಠಹೇಳುತ್ತಿದ್ದಾಗ ಕಂದಾಡೆ ಲಕ್ಷ್ಮಣಾಚಾರ್ಯರೆಂಬ ವಿದ್ವಾಂಸರು ಆ ಮಾರ್ಗವಾಗಿ ದಯಮಾಡಿಸಿದರು. ಪರೀಕ್ಷಾರ್ಥವಾಗಿ ಅಸೂಯಾಳುಗಳು ಹಿಂದೆಯೇ ಬರುತ್ತಿದ್ದರು. ವೇಂಕಟನಾಥರು ಲಕ್ಷ್ಮಣಾಚಾರ್ಯರು ದಯಮಾಡಿಸಿದುದನ್ನು ಗಮನಿಸಲಿಲ್ಲವಾಗಿ ಗ್ರಂಥಾವಲೋಕನದಲ್ಲಿಯೇ ಮಗ್ನರಾಗಿದ್ದರು. ಲಕ್ಷ್ಮಣಾಚಾರ್ಯರ ಶಿಷ್ಯರು ಆಚಾರ್ಯರ ಈ ನಡತೆಯನ್ನು ಔದಾಸೀನ್ಯವೆಂದು ಭಾವಿಸಿ ಅವರ ಎರಡು ಕಾಲುಗಳನ್ನೂ ಹಿಡಿದೆಳೆದು ಕೆಳಕ್ಕೆ ತಳ್ಳಿದರು. ಅದರಿಂದ ಆಚಾರ್ಯರು ಬಹಳವಾಗಿ ಪೆಟ್ಟನ್ನು ತಿಂದರೂ ತಾಳ್ಮೆಯಿಂದ ಅದರ ಕಾರಣವನ್ನು ವಿಚಾರಿಸಿ ಲಕ್ಷ್ಮಣಾಚಾರ್ಯರ ಕ್ಷಮಾಪಣೆಯನ್ನು ಬೇಡಿಕೊಂಡರು. ಇಂತಹ ಉಪದ್ರವಗಳನೇಕ ಗುರುಪರಂಪರೆಯಲ್ಲಿಯೂ ಇತರ ಗ್ರಂಥಗಳಲ್ಲಿಯೂ ವಿಸ್ತಾರವಾಗಿ ಚಿತ್ರಿತವಾಗಿವೆ. ಇವುಗಳನ್ನನುಭವಿಸಿಕೊಂಡು ಅವರ ಮಧ್ಯದಲ್ಲಿ ಶ್ರೀರಂಗದಲ್ಲಿ ವಾಸಮಾಡುವುದು

ಆಚಾರ್ಯರಿಗೆ ಸರ್ವಥಾ ಸಾಧ್ಯವಿಲ್ಲವಾಯಿತು. ಅದಕ್ಕಾಗಿ ಅವರು ತಮಗೆ ಇಷ್ಟವಿಲ್ಲದಿದ್ದರೂ ಶ್ರೀರಂಗವನ್ನು ಬಿಟ್ಟು ಮೈಸೂರು ದೇಶದಲ್ಲಿ ವಾಸಮಾಡುವುದಾಗಿ ನಿಶ್ಚಯಿಸಿ ತಿರುನಾರಾಯಣಪುರಕ್ಕೆ ದಯಮಾಡಿಸಿ ಅಲ್ಲಿ ಕೆಲವುಕಾಲವಿದ್ದು ಹಿಂದೆ ರಾಮಾನುಜಾಚಾರ್ಯರು ಮಂಗಳಾಶಾಸನಮಾಡಿದ ಸ್ಥಳಗಳಲ್ಲೆಲ್ಲ ದೇವರ ಸೇವೆಯನ್ನು ಮಾಡಿಕೊಂಡು ಕೊನೆಗೆ ಸತ್ಯಮಂಗಲಕ್ಕೆ ಬಂದು ಕೆಲವು ವರ್ಷಗಳ ಕಾಲ ಅಲ್ಲಿಯೇ ಸ್ಥಿರವಾಗಿ ನಿಂತರು.

ಸತ್ಯಮಂಗಲಕ್ಕೆ ಆಚಾರ್ಯರು ಯಾವಾಗ ಬಂದರೆಂಬ ವಿಷಯವು ನಿಷ್ಕೃಷ್ಟವಾಗಿ ತಿಳಿಯದು. ಶ್ರೀರಂಗಕ್ಕೆ ದೇಶಿಕರವರು ಕ್ರಿ.ಶ. ೧೩೧೦ ರಲ್ಲಿ ಬಂದಿರಬೇಕು. ಅಲ್ಲಿ ಎಷ್ಟು ವರ್ಷಗಳಿದ್ದರೆಂಬುದೂ ತಿಳಿಯದು. ಆದರೆ ಇಷ್ಟುಮಾತ್ರ ಹೇಳಬಹುದು. ಅವರಿಗೆ ಪುತ್ರೋತ್ಪನ್ನವಾದ ಕಾಲದಲ್ಲಿ ಅಂದರೆ, ಕ್ರಿ. ಶ. ೧೩೧೬ ರಲ್ಲಿ ಅವರು ಶ್ರೀರಂಗದಲ್ಲಿದ್ದರೆಂಬುದಕ್ಕೆ ಸಂದೇಹವಿಲ್ಲ. ಆದಾದ ಸ್ವಲ್ಪ ಕಾಲದಲ್ಲಿಯೇ ಅವರು ಶ್ರೀರಂಗವನ್ನು ಬಿಟ್ಟರೆಂಬುದಾಗಿ ತಿಳಿಯಬಂದಿರುವುದರಿಂದ ಅವರು ಸತ್ಯಮಂಗಲಕ್ಕೆ ಸುಮಾರು ಕ್ರಿ. ಶ. ೧೩೨೦ ರಲ್ಲಿ ಬಂದಿರಬೇಕು. ಅಂದಿನಿಂದ ನಲವತ್ತು ವರ್ಷಗಳ ಕಾಲ ಅವರು ಅಲ್ಲಿಯೇ ವಾಸಮಾಡುತ್ತಿದ್ದರು. ಹೀಗೆಂದ ಮಾತ್ರಕ್ಕೆ ಆ ಕಾಲದಲ್ಲಿ ಅವರು ಶ್ರೀರಂಗವನ್ನು ಪುನಃ ಪ್ರವೇಶ ಮಾಡಲೇ ಇಲ್ಲವೆಂದಲ್ಲ. ಅವರು ಸಂಸಾರಸಮೇತರಾಗಿ ಸತ್ಯಮಂಗಲದಲ್ಲಿ ವಾಸಮಾಡಿಕೊಂಡಿದ್ದು ಅವಶ್ಯಕ ಬಿದ್ದಾಗ ಶ್ರೀರಂಗಕ್ಕೆ ಹೋಗಿ ಬರುತ್ತಿದ್ದರು. ಈ ಕಾಲದಲ್ಲಿ ಅನೇಕ ವಿದ್ವಾಂಸರು ಆಚಾರ್ಯರಲ್ಲಿಗೆ ಬಂದು ಅವರ ದರ್ಶನವನ್ನು ಮಾಡಿಕೊಂಡು ಅವರು ವೇದಾಂತಸಂಘಾಟರೆಂದು ತಿಳಿದು ಆರಾಧಿಸುವುದಕ್ಕೆ ಮೊದಲುಮಾಡಿದರು. ಅವರ ಕುಮಾರರಾದ ವರದಾಚಾರ್ಯರು ಯೌವನಾವಸ್ಥೆಗೆ ಬಂದು ಮತೋದ್ಧಾರಕಾರ್ಯವನ್ನು ಪ್ರಾರಂಭಿಸಿದುದೂ ಈ ಕಾಲದಲ್ಲಿಯೇ. ಈ ಕಾಲದಲ್ಲಿಯೇ ಕಂದಾಡಿ

ಲಕ್ಷ್ಮಣಾಚಾರ್ಯರೇ ಮೊದಲಾದ ಅವರ ಪ್ರತಿಕಕ್ಷಿಗಳೂ ಶರಣಾಗತರಾಗಿ ಅವರ ವೈಭವವನ್ನು ಕೊಂಡಾಡುವುದಕ್ಕೆ ಮೊದಲುಮಾಡಿದುದು. ಬ್ರಹ್ಮತಂತ್ರಸ್ವಾಮಿಗಳೇ ಮೊದಲಾದವರು ಆಚಾರ್ಯರ ಶಿಷ್ಯರಾಗಿ ವಿಮತಸ್ಥರನ್ನು ವಾದದಲ್ಲಿ ಸೋಲಿಸಿ ಮೈಸೂರು ದೇಶದಲ್ಲಿ ದೇಶಿಕೋಪಾಸನೆಯನ್ನು ಪ್ರಚಾರಮಾಡುವುದಕ್ಕೆ ತೊಡಗಿದುದೂ ಈಗಲೇ.

## ಮುಹಮ್ಮದೀಯರಿಂದ ಶ್ರೀರಂಗದ ಮುತ್ತಿಗೆ

ಆಚಾರ್ಯರು ಸತ್ಯಮಂಗಲಕ್ಕೆ ಹೋದ ಕೆಲವು ವರ್ಷಗಳ ತರುವಾಯ ಶ್ರೀರಂಗವು ಮುಹಮ್ಮದೀಯರ ಮುತ್ತಿಗೆಗೆ ಒಳಗಾಯಿತು.[32] ದಕ್ಷಿಣಭಾರತದ ಅನೇಕ ರಾಜ್ಯಗಳನ್ನೂ ದೇಶಗಳನ್ನೂ ನಾಶಪಡಿಸುತ್ತ ಬಂದ ಮುಹಮ್ಮದೀಯ ಸೈನ್ಯವು ಶ್ರೀರಂಗದ ಕಡೆಗೂ ನುಗ್ಗಿತು. ಅದು ತೊಂಡೈಮಂಡಲದ ಹತ್ತಿರಕ್ಕೆ ಬರುವುದಕ್ಕೆ ಮುಂಚೆಯೇ ಶ್ರೀರಂಗಕ್ಕೆ ಸಮಾಚಾರವು ಮುಟ್ಟಿತು. ಆಗ ದೇಶಿಕರು ಅಲ್ಲಿಯೇ ಇದ್ದರು. ಈ ಆಪತ್ಪರಿಹಾರಾರ್ಥವಾಗಿ ರಂಗನಾಥನಿಗೆ ಉತ್ಸವವನ್ನು ಮಾಡಿಸುತ್ತಿದ್ದ ಕಾಲದಲ್ಲಿ ಮುಹಮ್ಮದೀಯ ಸೈನ್ಯವು ಕಾವೇರಿಯ ಆಚೆಯ ದಡಕ್ಕೆ ಬಂದಿದೆಯೆಂಬ ಸುದ್ದಿ ಬಂದಿತು. ತತ್ಕ್ಷಣವೇ ದೇವಸ್ಥಾನದ ಮುಖ್ಯಾಧಿಕಾರಿಯಾದ ಶ್ರೀರಂಗರಾಜನಾಥವಾಧೂಲದೇಶಿಕರೆಂಬುವರು ಬಹಳ ಉಪಾಯದಿಂದ ರಂಗನಾಥದೇವರ ಉತ್ಸವವಿಗ್ರಹವನ್ನು ಶ್ರೀಭೂದೇವಿಯರನ್ನೂ ದೇವಸ್ಥಾನದ ಆಭರಣಗಳನ್ನೂ ಒಂದು ಪಲ್ಲಕ್ಕಿಯಲ್ಲಿಟ್ಟು ಕೆಲವು ಬ್ರಾಹ್ಮಣರ ಜೊತೆಯಲ್ಲಿ ಗುಪ್ತವಾಗಿ ಶ್ರೀರಂಗದಿಂದ ಹೊರಕ್ಕೆ ಕಳುಹಿಸಿ ಗರ್ಭಗೃಹದ ಸುತ್ತಲೂ ಕಲ್ಲುಗೋಡೆಗಳನ್ನು ಹಾಕಿಸಿ ಕೃತ್ರಿಮ ವಿಗ್ರಹ

---

32. ಮುಹಮ್ಮದೀಯರ ಮುತ್ತಿಗೆಯಿಂದ ಶ್ರೀರಂಗಕ್ಕೆ ಆದ ನಷ್ಟವನ್ನು 'ತೆಂಗಲೆಗುರುಪರಂಪರೆ', 'ಕೋಯಿಲುಲುಹು', 'ಯತೀಂದ್ರಪ್ರವಣಪ್ರಭಾವಂ' 'ವೈಭವಪ್ರಕಾಶಿಕೆ' ಇವುಗಳಲ್ಲಿ ನೋಡಿ.

ಗಳನ್ನು ಇಟ್ಟರು. ಸ್ವಲ್ಪಹೊತ್ತಿನಲ್ಲಿಯೇ ಮಹಮ್ಮದೀಯರು ಕಾವೇರಿಯ ನದಿಯನ್ನು ದಾಟಿಬಂದು ಶ್ರೀರಂಗವನ್ನು ರಕ್ಷಿಸಲು ಸಿದ್ಧರಾಗಿ ನಿಂತಿದ್ದ ಹನ್ನೆರಡುಸಾವಿರ ಜನರನ್ನು ಎದುರಿಸಿ ಅನೇಕರನ್ನು ಕೊಲೆ ಮಾಡಿ ದೇವಸ್ಥಾನವನ್ನು ಸೂರೆಗೊಂಡು ಅದರಿಂದ ಲಭ್ಯವಾದ ಅಪಾರವಾದ ಐಶ್ವರ್ಯದಿಂದ ಕಣ್ಣಾನೂರು ಕೋಟೆಯನ್ನು ಕಟ್ಟಿಸಿದರು.

## “ ಶ್ರುತಪ್ರಕಾಶಿಕೆ ”ಯ ರಕ್ಷಣೆ

ವೇದಾಂತಾಚಾರ್ಯರೂ ದೇವರ ವಿಗ್ರಹದ ಜೊತೆಯಲ್ಲಿಯೇ ಹೋಗಬೇಕೆಂದಿದ್ದರು. ಆದರೆ ಅಲ್ಲಿದ್ದವರು ಸುಪ್ರಸಿದ್ಧ ಪಂಡಿತರಾದ ಸುದರ್ಶನಭಟ್ಟರ ‘ಶ್ರುತಪ್ರಕಾಶಿಕೆ’ಯೆಂಬ ಭಾಷ್ಯಗ್ರಂಥವನ್ನೂ ಸುದರ್ಶನಾಚಾರ್ಯರ ಮಕ್ಕಳುಗಳಾದ ವೇದಾಚಾರ್ಯ ಮತ್ತು ಪರಾಂಕುಶಭಟ್ಟರೆಂಬಿಬ್ಬರನ್ನೂ ರಕ್ಷಿಸುವ ಕೆಲಸವನ್ನು ಅವರಿಗೆ ವಹಿಸಿದರು. ಆಚಾರ್ಯರು ಅದಕ್ಕೆ ಒಪ್ಪಿ ಆ ತಾಳಪತ್ರದ ಗ್ರಂಥವನ್ನು ಕಾವೇರಿಯ ಮರಳಿನಲ್ಲಿ ಹೂತಿಟ್ಟು ಮಹಮ್ಮದೀಯರ ಸೈನ್ಯವು ಶ್ರೀರಂಗವನ್ನು ಬಿಟ್ಟುಹೋಗುವವರೆಗೆ ತಾವೂ ಆ ಇಬ್ಬರು ಮಕ್ಕಳೂ ರಾಶಿಯಾಗಿ ಬಿದ್ದಿದ್ದ ಶವಗಳ ಮಧ್ಯದಲ್ಲಿ ಅವಿತುಕೊಂಡಿದ್ದು ಅನಂತರ ಸತ್ಯಮಂಗಲಕ್ಕೆ ಸುರಕ್ಷಿತವಾಗಿ ಹೋಗಿ ಸೇರಿದರು. ಸುದರ್ಶನಾಚಾರ್ಯರೂ ಅಳಹಿಯಮಣವಾಳನಾಯನಾರರೂ ಮಹಮ್ಮದೀಯರಿಂದ ಕೊಲ್ಲಲ್ಪಟ್ಟರು. ಶ್ರೀರಂಗವು ಜನರಹಿತವಾದ ಹಾಳುಕೊಂಪೆಯಾಯಿತು. ಇಂತಹ ದುರವಸ್ಥೆಯನ್ನು ಆಚಾರ್ಯರು ಪ್ರತ್ಯಕ್ಷ ನೋಡಿದುದರಿಂದಲೇ ಅವರು ಈ ವಿಪತ್ತನ್ನು ತಪ್ಪಿಸಬೇಕೆಂದು ಅನವರತ ರಂಗನಾಥನಲ್ಲಿ ಮೊರೆಯಿಡುತ್ತಿದ್ದರು. ಈ ಕಾಲದಲ್ಲಿಯೇ ರಚಿತವಾದುದು ‘ ಅಭೀತಿಸ್ತವ ’ ವೆಂಬ ಸ್ತೋತ್ರ. ಇದರ ಮುಂದಿನ ಎರಡು ಶ್ಲೋಕಗಳಿಂದ ಮಹಮ್ಮದೀಯರಿಂದುಂಟಾದ ಭಯದ ಆಧಿಕ್ಯವು ಗೊತ್ತಾಗುವುದು—

ಕಲಿಪ್ರಣಿಧಿಲಕ್ಷಣೈಃ ಕಲಿತಶಾಕ್ಯಲೋಕಾಯತೈಃ
ತುರುಷ್ಕಯವನಾದಿಭಿರ್ಜಗತಿ ಜೃಮ್ಭಮಾಣಂ ಭಯಮ್ ।
ಪ್ರಕೃಷ್ಟನಿಜಶಕ್ತಿಭಿಃ ಪ್ರಸಭಮಾಯುಧೈಃ ಪಂಚಭಿಃ
ಕ್ಷಿತಿತ್ರಿದಶರಕ್ಷಕೈಃ ಕ್ಷಪಯ ರಂಗನಾಥ ಕ್ಷಣಾತ್ ॥

ಮನುಪ್ರಭೃತಿಮಾನಿತೇ ಮಹತಿ ರಂಗಧಾಮಾಧಿಕೇ
ದನುಪ್ರಭವದಾರುಣೈಃ ದರಮುದೀರ್ಯಮಾಣಂ ಪರೈಃ ।
ಪ್ರಕೃಷ್ಟಗುಣಕಶ್ರಿಯಾ ವಸುಧಯಾ ಚ ಸಂಧುಕ್ಷಿತಃ
ಪ್ರಬುದ್ಧಕರುಣೋದಧೇ ಪ್ರಶಮಯ ಸ್ವಶಕ್ತ್ಯಾ ಸ್ವಯಮ್ ॥

ಇತ್ತ ಶ್ರೀರಂಗನಾಥದೇವರ ಜೊತೆಯಲ್ಲಿ ಹೊರಟವರಲ್ಲಿ ಪಿಳ್ಳೈ ಲೋಕಾಚಾರ್ಯರು ಅಗ್ರಗಣ್ಯರು. ಇವರೂ ಇವರೊಡನಿದ್ದವರೂ ವಿಗ್ರಹವನ್ನು ರಕ್ಷಿಸುವುದಕ್ಕಾಗಿ ಹಗಲಿರುಳು ಕಾಡುಮೇಡುಗಳಲ್ಲಿ ಸುತ್ತಿ ನಿದ್ರಾಹಾರಗಳನ್ನು ತೊರೆದು ಜ್ಯೋತಿಷ್ಕುಡಿಯೆಂಬ ಗ್ರಾಮವನ್ನು ಸೇರಿದರು. ಈ ಕಾರ್ಯದಲ್ಲಿ ಲೋಕಾಚಾರ್ಯರ ಭಾಗವು ಅತಿ ಶ್ಲಾಘನೀಯವಾದುದು. ವೃದ್ಧರಾದುದರಿಂದ ಅಪಾರವೂ ಅತಿದಾರುಣವೂ ಆದ ಮಾರ್ಗಾಯಾಸವನ್ನೂ ಮನೋವ್ಯಥೆಯನ್ನೂ ಸಹಿಸಲಾರದವರಾಗಿ ಅವರು ಜ್ಯೋತಿಷ್ಕುಡಿಯಲ್ಲಿಯೇ ಪರಂಧಾಮವನ್ನೈದಿದರು. ಉಳಿದವರು ದೇವರನ್ನು ಅಳಹರ್ ಮಲೈ, ಮಧುರೆ, ಕಲ್ಲಿಕೋಟೆ, ತಿರುನಾರಾಯಣಪುರ ಮೊದಲಾದೆಡೆಗೆ ತೆಗೆದುಕೊಂಡು ಹೋಗಿ ಪೂಜಿಸುತ್ತಿದ್ದು ಕೊನೆಗೆ ತಿರುಪತಿಗೆ ಬಂದು ಸೇರಿ ಅಲ್ಲಿಯೇ ಅನೇಕ ವರ್ಷಕಾಲ ಇರುತ್ತಿದ್ದರು.

ಈ ಮಧ್ಯೆ ದೇಶಿಕರು ತಿರುನಾರಾಯಣಪುರಕ್ಕೆ ದಯಮಾಡಿಸಿ ಭಾಷ್ಯಕಾಲಕ್ಷೇಪಮಾಡಿಸುತ್ತಿದ್ದರು. ಹಿಂದೆ ಶ್ರೀ ರಾಮಾನುಜಾಚಾರ್ಯರ ಕಾಲದಲ್ಲಿ ಮೈಸೂರುದೇಶವು ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಸಹಾಯ ಮಾಡಿದಂತೆ ಈಗಲೂ ವಿಶೇಷವಾದ ಪ್ರೋತ್ಸಾಹವನ್ನು ನೀಡಿತು. ಹೊಯ್ಸಳರ ದೊರೆಯಾದ ಮೂರನೆಯ ವೀರಬಲ್ಲಾಳನು ಆಚಾರ್ಯರ

ಶಿಷ್ಯನಾದನು. ತಿರುನಾರಾಯಣಪುರದ ನಿವಾಸಿಗಳು ಆಚಾರ್ಯರ ಲೋಕೋಪಕಾರವಾದ ಕಾರ್ಯಗಳನ್ನೂ ಅವರ ಅಮೋಘವಾದ ಯಶಸ್ಸನ್ನು ಶಾಶ್ವತಗೊಳಿಸುವುದಕ್ಕಾಗಿ

ರಾಮಾನುಜದಯಾಪಾತ್ರಂ ಜ್ಞಾನವೈರಾಗ್ಯಭೂಷಣಮ್ ।
ಶ್ರೀಮದ್ವೇಂಕಟನಾಥಾರ್ಯಂ ವನ್ದೇ ವೇದಾಂತದೇಶಿಕಮ್ ॥[33]
ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರಿ ।
ವೇದಾನ್ತಾಚಾರ್ಯವರ್ಯೋ ಮೇ ಸಂನಿಧತ್ತಾಂ ಸದಾ ಹೃದಿ ॥[34]

ಎಂಬ ಎರಡು ಶ್ಲೋಕಗಳನ್ನು ರಚಿಸಿ ಅವುಗಳನ್ನು ಗ್ರಂಥಾವಲೋಕನ ಮಾಡುವಾಗ ಮೊದಲು ಉಚ್ಚಾರಣೆಮಾಡಿ ಅನಂತರ ಗ್ರಂಥವನ್ನುಪ್ರಾರಂಭಿಸಬೇಕೆಂದು ನಿಶ್ಚಯಿಸಿದರು. ಈ ಸಂಪ್ರದಾಯವು ಈಗಲೂ ಶ್ರೀವೈಷ್ಣವರಲ್ಲಿ ರೂಢಿಯಲ್ಲಿದೆ. ಇದಾದಮೇಲೆ ಕೆಲವುಕಾಲ ಆಚಾರ್ಯರು ತಿರುನಾರಾಯಣಪುರದಲ್ಲಿದ್ದು ಪುನಃ ಸತ್ಯಮಂಗಲಕ್ಕೆ ತೆರಳಿ ಅಲ್ಲಿ ಇಪ್ಪತ್ತು ವರ್ಷಗಳಕಾಲ ಗ್ರಂಥಕಾಲಕ್ಷೇಪಮಾಡುತ್ತಿದ್ದರು.

## ಆಚಾರ್ಯರಿಗೆ ವಿದ್ಯಾರಣ್ಯರಿಂದ ಆಹ್ವಾನ

ಈ ಕಾಲದಲ್ಲಿಯೇ ಇವರ ಸ್ನೇಹಿತರೂ ವಿಜಯನಗರಸಿಂಹಾಸನಪ್ರತಿಷ್ಠಾಪನಾಚಾರ್ಯರೆಂದು ಪ್ರಖ್ಯಾತರೂ ಆದ ವಿದ್ಯಾರಣ್ಯರು ಆಚಾರ್ಯರು ವಿಜಯನಗರಕ್ಕೆ ದಯಮಾಡಿಸಿ ರಾಜಾಸ್ಥಾನದಲ್ಲಿ ಸುಖದಿಂದರಬಹುದೆಂದು ಹೇಳಿ ಕಳುಹಿಸಿದರು. ಆದರೆ ವೈರಾಗ್ಯನಿಧಿಯಾದ ಆಚಾರ್ಯರ ಮನಸ್ಸು ನಶ್ವರವಾದ ಐಹಿಕಸಂಪತ್ತುಗಳಿಗಾಗಿ ರಾಜರನ್ನು ಆಶ್ರಯಿಸಲು ಒಡಂಬಡಲಿಲ್ಲವಾಗಿ ಅವರು 'ವೈರಾಗ್ಯಪಂಚಕ'ವೆಂಬ ಐದು ಶ್ಲೋಕಗಳನ್ನು ರಚಿಸಿ ವಿದ್ಯಾರಣ್ಯರಿಗೆ ಕಳುಹಿಸಿ ತಮಗೆ ಪುರಸ್ಕಾರ[illegible]

33 ಇದು ಬ್ರಹ್ಮತಂತ್ರ ಸ್ವತಂತ್ರಸ್ವಾಮಿಗಳು ಅಪ್ಪಣೆಕೊಡಿಸಿದುದು.

34 ಇದು ನಯನಾಚಾರ್ಯರವರು ಅಪ್ಪಣೆಕೊಡಿಸಿದುದು.

ಮಾಡಲು ಇಷ್ಟವಿಲ್ಲವೆಂಬುದನ್ನು ಶ್ರುತಪಡಿಸಿದರು. ವೈರಾಗ್ಯಪಂಚಕದ ಈ ಕೆಳಗಿನ ಶ್ಲೋಕಗಳು ಅವರ ವೈರಾಗ್ಯದ ಪರಾಕಾಷ್ಠೆಯನ್ನೂ ದೈವಭಕ್ತಿಯ ಸೀಮಾರೇಖೆಯನ್ನೂ ವಿಶದಗೊಳಿಸುವುವು

**ಸಿಲಂ ಕಿಮನಲಂಭವೇದನಲಮೌದರಂ ಬಾಧಿತುಂ**
**ಪಯಃ ಪ್ರಸೃತಿಪೂರಕಂ ಕಿಮು ನಧಾರಕಂ ಸಾರಸಂ।**
**ಅಯತ್ನಮಲಮಲ್ಲಕಂ ಪಥಿ ಪಟಚ್ಚರಂ ಕಚ್ಚರಂ**
**ಭಜನ್ತಿ ವಿಭುಧಾ ಮುಧಾಹ್ಯಹಹ ಕುಕ್ಷಿತಃ ಕುಕ್ಷಿತಃ ॥**

**ಕ್ಷೋಣೀಕೋಣ ಶತಾಂಶಪಾಲನಕಲಾ ದುರ್ವಾರಗರ್ವಾನಲ**
**ಕ್ಷುಭ್ಯತ್ಕ್ಷುದ್ರನರೇಂದ್ರಚಾಟುರಚನಾ ಧನ್ಯಾನ್ನ ಮನ್ಯಾಮಹೇ**
**ದೇವಂ ಸೇವಿತುಮೇವ ನಿಶ್ಚಿನುಮಹೇ ಯೋऽಸೌದಯಾಳುಃ ಪುರಾ**
**ಧಾನಾಮುಷ್ಟಿಮುಚೇ ಕುಚೇಲಮುನಯೇ ದತ್ತೇ ಸ್ಮ ವಿತ್ತೇಶತಾಮ್ ॥**

**ನಾಸ್ತಿ ಪಿತ್ರಾರ್ಜಿತಂ ಕಿಂಚಿನ್ನ ಮಯಾ ಕಿಂಚಿದಾರ್ಜಿತಮ್ ।**
**ಅಸ್ತಿ ಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಮ್ ॥**

[ಕಣದಲ್ಲಿ ಉದುರಿರುವ ಕಾಳುಗಳನ್ನು ಆರಿಸಿಕೊಂಡರೆ ಹಸಿವು ಅಡಗಲಾರದೇ? ಕೊಳದಲ್ಲಿ ಒಂದು ಬೊಗಸೆಯ ನೀರನ್ನು ಕುಡಿದರೆ ಪ್ರಾಣಧಾರಕ್ಕೆ ಸಾಲದೇ? ದಾರಿಯಲ್ಲಿ ಬಿದ್ದಿರುವ ಹರಕುಬಟ್ಟೆಯು ಕೌಪೀನವಾಗಲಾರದೇ? ವಿದ್ವಾಂಸರು ವ್ಯರ್ಥವಾಗಿ ತಮ್ಮ ಹೊಟ್ಟೆಗೋಸ್ಕರ ಅಲ್ಪರಾಜರುಗಳನ್ನು ಆಶ್ರಯಿಸುತ್ತಾರೆ. ಪ್ರಪಂಚದ ಯಾವುದೋ ಒಂದು ಭಾಗದ ಏಕದೇಶವನ್ನು ಆಳುತ್ತಾ ಗರ್ವದಿಂದ ಮೆರೆಯುತ್ತಿರುವ ಕ್ಷುದ್ರರಾಜರ ವಿಷಯದಲ್ಲಿ ಚಾಟುರಚನೆಯನ್ನು ಮಾಡುವುದು ಯೋಗ್ಯವೆಂದು ನಾನು ಭಾವಿಸುವುದಿಲ್ಲ. ದಯೆಯಿಂದ ಹಿಂದೆ ಕುಚೇಲನಿಗೆ ಅಪಾರವಾದ ಐಶ್ವರ್ಯವನ್ನು ಕೊಟ್ಟ ಕೃಷ್ಣಪರಮಾತ್ಮನನ್ನು ಸೇವಿಸುವುದರಲ್ಲಿಯೇ ನಿಶ್ಚಿತವಾದ ಮನಸ್ಸನ್ನುಳ್ಳವನಾಗಿದ್ದೇನೆ. ನನಗೆ ನಾನು ಸಂಪಾದಿಸಿ

ದ್ದಾಗಲಿ ನಮ್ಮ ತಂದೆಯು ಸಂಪಾದಿಸಿದ್ದಾಗಲಿ ಯಾವ ಆಸ್ತಿಯೂ ಇಲ್ಲ. ಆದರೆ ಪಿತಾಮಹ (ತಾತ-ಬ್ರಹ್ಮ)ನು ಸಂಪಾದಿಸಿದ ಮಹದ್ಧನವಾದ ವರದರಾಜಸ್ವಾಮಿಯು ಹಸ್ತಿಗಿರಿ (ಕಂಚಿ) ಯಲ್ಲಿದ್ದಾನೆ. ಅದೇ ನನಗೆ ಸಾಕಾಗಿದೆ.] ಆಚಾರ್ಯರ ಈ ವಿರಕ್ತಿಗೆ ಮೆಚ್ಚಿ ವಿದ್ಯಾರಣ್ಯರು ಅವರನ್ನು ಬಲಾತ್ಕರಿಸಲಿಲ್ಲ.

## ಶ್ರೀರಂಗನಾಥರ ಪುನಃ ಪ್ರತಿಷ್ಠೆ

ವೇದಾಂತಾಚಾರ್ಯರು ಸತ್ಯಮಂಗಲದಲ್ಲಿದ್ದಾಗ ರಂಗನಾಥವಿಗ್ರಹಕ್ಕೆ ಬಂದ ವಿಪತ್ತಿನ ವಿಷಯದಲ್ಲಿಯೂ ಶ್ರೀರಂಗಕ್ಕೂ ಶ್ರೀವೈಷ್ಣವಜನರಿಗೂ ಉಂಟಾದ ಹಾನಿಯ ವಿಷಯದಲ್ಲಿಯೂ ಹಗಲಿರುಳೂ ದುಃಖಿಸುತ್ತಾ ಭಗವಂತನನ್ನು ಪ್ರಾರ್ಥಿಸುತ್ತಿದ್ದ ವಿಷಯವನ್ನು ಹಿಂದೆಯೇ ತಿಳಿಸಿದೆ. ಅವರ ಪ್ರಾರ್ಥನೆಗೆ ಭಗವಂತನು ಮೆಚ್ಚಿದಂತೆ ಕಾಣುತ್ತದೆ. ಕ್ರಿ. ಶ. ೧೩೬೫ ರಲ್ಲಿ ವಿಜಯನಗರದ ಬುಕ್ಕರಾಯನ ಸೇನಾನಾಯಕನಾದ ಗೋಪಣ್ಣದಂಡನಾಯಕನು ಶ್ರೀರಂಗದಿಂದ ತುರುಕರನ್ನು ಓಡಿಸಿ ತಿರುಪತಿಯಲ್ಲಿದ್ದ ರಂಗನಾಥವಿಗ್ರಹವನ್ನು ಪುನಃ ಶ್ರೀರಂಗದಲ್ಲಿ ಪ್ರತಿಷ್ಠೆಮಾಡಿಸಿದನು. ಆ ಕಾಲದಲ್ಲಿ ಜ್ಞಾಪಕಾರ್ಥವಾಗಿ ರಚಿತವಾದ ಈ ಮುಂದಿನ ಎರಡು ಶ್ಲೋಕಗಳನ್ನು ಈಗಲೂ ಶ್ರೀರಂಗನಾಥಸ್ವಾಮಿಯವರ ದೇವಸ್ಥಾನದ ಗೋಡೆಯ ಮೇಲೆ ನೋಡಬಹುದು.

**ಆನೀಯಾನೀಲಶೃಙ್ಗದ್ಯುತಿರಚಿತಜಗದ್ರಞ್ಜನಾದಞ್ಜನಾದ್ರೇಃ**
**ಚೆಂಚ್ಯಾಮಾರಾಧ್ಯ ಕಂಚಿತ್ ಸಮಯಮಥ ನಿಹತ್ಯೋದ್ಧನುಷ್ಕಾಂಸ್ತುಲುಷ್ಕಾನ್ ।**
**ಲಕ್ಷ್ಮೀಭೂಭ್ಯಾಮುಭಾಭ್ಯಾಂ ಸಹ ನಿಜನಗರೇ ಸ್ಥಾಪಯನ್ ರಙ್ಗನಾಥಂ**
**ಸಮ್ಯಗ್ವರ್ಯಾಂ ಸಪರ್ಯಾಮಕೃತ ಭುವಿ ಯಶೋ ದರ್ಪಣೋ ಗೊಪ್ಪಣಾರ್ಯಃ ॥**

ವಿಶ್ವೇಶಂ ರಂಗರಾಜಂ ವೃಷಭಗಿರಿತಟಾದ್ಗೋಪ್ಪಣಕ್ಷ್ಮೋಣಿದೇವಃ
ನೀತ್ವಾ ಸ್ವಾಂ ರಾಜಧಾನೀಂ ನಿಜಬಲನಿಹಿತೋತ್ಸಿಕ್ತತೌಲುಷ್ಕಸೈನ್ಯಃ ।
ಕೃತ್ವಾ ಶ್ರೀರಂಗಭೂಮಿಂ ಕೃತಯುಗಸಹಿತಾಂ ತಂ ಚ ಲಕ್ಷ್ಮೀ
ಮುಭಾಭ್ಯಾಂ
ಸಂಸ್ಥಾಪ್ಯಾಸ್ಯಾಂ ಸರೋಜೋದ್ಭವ ಇವ ಕುರುತೇ ಸಾಧುಚರ್ಯಾಂ
ಸಪರ್ಯಾಮ್ ॥[35]

## ಆಚಾರ್ಯರ ಅವತಾರ ಕೃತ್ಯದ ಪರಿಸಮಾಪ್ತಿ

ಈ ವಿಷಯವು ಆಚಾರ್ಯರಿಗೆ ತಿಳಿದೊಡನೆಯೇ ಅವರ ಸಂತೋಷಕ್ಕೆ ಪಾರವೇ ಇಲ್ಲ. ತತ್ಕ್ಷಣವೇ ಅವರು ತಮ್ಮ ಶಿಷ್ಯರೊಡನೆ ಶ್ರೀರಂಗಕ್ಕೆ ದಯಮಾಡಿಸಿದರು. ಆಗ ಅವರಿಗೆ ತೊಂಬತ್ತೈದು ವರ್ಷಗಳಾಗಿದ್ದುವು. ಕೊನೆಯವರೆಗೂ ಗ್ರಂಥರಚನೆಯಲ್ಲಿಯೇ ಮಗ್ನರಾಗಿದ್ದ ಅವರು ಈ ವಯಸ್ಸಿನಲ್ಲಿ ಪ್ರಪತ್ತಿವಿಷಯಕವಾದ 'ರಹಸ್ಯತ್ರಯಸಾರ'[36]ವೆಂಬ

---

35. ಈ ಶಾಸನವು ಶ್ರೀರಂಗದ ದೇವಸ್ಥಾನದ ಪೂರ್ವಭಾಗದ ಗೋಡೆಯ ಮೇಲಿದೆ. ಇದರಲ್ಲಿರುವ ಮೇಲಿನೆರಡು ಶ್ಲೋಕಗಳು ವೇದಾಂತಾಚಾರ್ಯರಿಂದಲೇ ರಚಿತವಾದುವೆಂಬ ಪ್ರತೀತಿ ಇದೆ. ಆದರೆ ಈ ಶಾಸನವು ಕ್ರಿ.ಶ. ೧೩೭೧-೨ ರಲ್ಲಿ ಸ್ಥಾಪಿತವಾದುದು. ಆಗ ವೇದಾಂತಾಚಾರ್ಯರು ಜೀವಂತರಾಗಿರಲಿಲ್ಲ. ರಂಗನಾಥ ವಿಗ್ರಹಪ್ರತಿಷ್ಠೆಯ ಜ್ಞಾಪಕಾರ್ಥವಾಗಿ ರಚಿತವಾದ ಈ ಶ್ಲೋಕಗಳನ್ನು ಶಾಶ್ವತಗೊಳಿಸುವುದಕ್ಕಾಗಿ ಪ್ರತಿಷ್ಠೆಯಾದ ಕೆಲವು ವರ್ಷಗಳ ಮೇಲೆ ಕೆತ್ತಿಸಿರಬಹುದು. ಶ್ರೀಮಾನ್ ಟಿ. ರಾಜಗೋಪಾಲಾಚಾರ್ಯರು ಇದರಲ್ಲಿರುವ ಕೆಲವು ದೋಷಗಳಿಂದಲೂ ಎರಡು ಶ್ಲೋಕಗಳೂ ಏಕಾರ್ಥವಾಗಿರುವುದರಿಂದಲೂ ಇದು ಕೃತಕವಿರಬಹುದೆಂದು ಊಹಿಸುತ್ತಾರೆ.

36. ಇದಕ್ಕೆ ಪಂಚವ್ಯಾಖ್ಯಾನಗಳೆಂಬುದಾಗಿ ಪ್ರಸಿದ್ಧವಾಗಿರುವ 'ಸಾರಪ್ರಕಾಶಿಕೆ,' 'ಸಾರವಿವರಣೆ' 'ಸಾರದೀಪಿಕೆ' 'ಸಾರಾಸ್ವಾದಿನಿ' 'ಸಾರಪ್ರಕಾಶಿಕಾಸಂಗ್ರಹ' ಎಂಬ ಐದು ವ್ಯಾಖ್ಯಾನಗಳಿವೆ. ಇವಲ್ಲದೆ ನಯನಾಚಾರ್ಯರಿಂದ ರಚಿತವಾದ ವಿರೋಧಪರಿಹಾರವು ರಹಸ್ಯತ್ರಯಸಾರದ ಸಂದೇಹಗಳನ್ನು ನಿವೃತ್ತಿ ಮಾಡುವುದು.

ವಿಶಿಷ್ಟಾದ್ವೈತಪ್ರಕರಣಗ್ರಂಥವನ್ನು ಮಣಿಪ್ರವಾಳದಲ್ಲಿ ರಚಿಸಿದರು. (ಇದು ಮಹಾಮಂತ್ರಗಳ ಗೂಢಾರ್ಥವನ್ನು ವಿವರಿಸುವ ವ್ಯಾಜದಲ್ಲಿ ವಿಶಿಷ್ಟಾದ್ವೈತಸಿದ್ಧಾಂತದ ಪ್ರಕಾರ ಈಶ್ವರತತ್ತ್ವ, ಮೋಕ್ಷಸಾಧನೋಪಾಯ, ಮೋಕ್ಷಸ್ವರೂಪ ಮೊದಲಾದುವನ್ನೆಲ್ಲಾ ವಿವರಿಸುತ್ತದೆ. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ. ಇದರ ಪ್ರತಿಯೊಂದು ಅಧಿಕಾರದ ಆದ್ಯಂತದಲ್ಲಿಯೂ ಸಂಸ್ಕೃತಶ್ಲೋಕಗಳೂ ತಮಿಳುಪಾಶುರಗಳೂ ಇವೆ. ಇದರಲ್ಲಿ ಪ್ರಪನ್ನನ ಲಕ್ಷಣವನ್ನು ಹೇಳುವ

> ಸಂತೋಷಾರ್ಥಂ ವಿಮೃಶತಿ ಮುಹುಃ ಸದ್ಭಿರಧ್ಯಾತ್ಮವಿದ್ಯಾಂ
> ನಿತ್ಯಂ ಬ್ರೂತೇ ನಿಶಮಯತಿ ಚ ಸ್ವಾದುಸುವ್ಯಾಹೃತಾನಿ ।
> ಅಂಗೀಕುರ್ವನ್ನನಘಲಲಿತಾಂ ವೃತ್ತಿಮಾದೇಹಪಾತಾತ್
> ದೃಷ್ಟಾದೃಷ್ಟಸ್ವಭರವಿಗಮೇ ದತ್ತದೃಷ್ಟಿಃ ಪ್ರಪನ್ನಃ ॥

ಎಂಬ ಶ್ಲೋಕವು ಸರ್ವಾದರಣೀಯವಾಗಿದೆ.) ಅಲ್ಲದೆ ಗೊಪ್ಪಣದಂಡನಾಯಕನ ಸಹಾಯದಿಂದ ಚಿದಂಬರದಲ್ಲಿ ಶಿಥಿಲವಾಗಿದ್ದ ಗೋವಿಂದರಾಜಸ್ವಾಮಿಯ ದೇವಾಲಯವನ್ನು ಜೀರ್ಣೋದ್ಧಾರಮಾಡಿದರು.

---

'ಕಾರಿಕಾವರ್ಣನ' ವೆಂಬುದು 'ರಹಸ್ಯತ್ರಯಸಾರ'ದ ಸಂಸ್ಕೃತವ್ಯಾಖ್ಯಾನ. 'ರಹಸ್ಯತ್ರಯಸಾರಗೂಢಾರ್ಥವಿವರಣ' ವೆಂಬುದು ಅದರ ತಮಿಳುಭಾಷೆಯ ವಿವರಣೆ. ಇವಲ್ಲದೆ ಇದೇ ರಹಸ್ಯತ್ರಯಸಾರಕ್ಕೆ ಕರೂರು ಶ್ರೀಶೈಲದೇಶಿಕಾಚಾರ್ಯಸ್ವಾಮಿಯವರು 'ಬೃಹತ್ಸಂಪ್ರದಾಯಸುಧಾ' 'ಲಘುಸಂಪ್ರದಾಯಸುಧಾ' 'ಬೃಹತ್ಸಾರಾರ್ಥಕುಸುಮಾಞ್ಜಲಿ' 'ಲಘುಸಾರಾರ್ಥಕುಸುಮಾಞ್ಜಲಿ' 'ಸಾರತಾತ್ಪರ್ಯನಿರ್ಣಯ' 'ಸಾರತಾತ್ಪರ್ಯಕೌಮುದಿ' ಎಂಬ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಇವರೇ ತುರೀಯಾಶ್ರಮದಲ್ಲಿ ರಂಗರಾಮಾನುಜರೆಂಬ ಅಪರ ನಾಮಧೇಯದಿಂದ ವೇದಾಂತಾಚಾರ್ಯರವರ 'ಶತದೂಷಿಣಿ'ಯ ವೃತ್ತ್ಯನುವಾದಭಂಗವಾದಕ್ಕೆ ಪ್ರಸಿದ್ಧ ಅದ್ವೈತಗ್ರಂಥಗಳಾದ ಗುರು ಲಘು ಚಂದ್ರಿಕೆಗಳ ಖಂಡನರೂಪವಾದ 'ನಯಪ್ರಕಿರಣ' ವೆಂಬ ವ್ಯಾಖ್ಯಾನವನ್ನೂ ನ್ಯಾಸವಿಷಯಕವಾದ 'ನ್ಯಾಸವಿದ್ಯಾವಿಜಯ' 'ನ್ಯಾಸವಿದ್ಯಾಭೂಷಣ' 'ನ್ಯಾಸಸಿದ್ಧಾಞ್ಜನ' 'ನಿಕ್ಷೇಪಸಿದ್ಧಾಞ್ಜನ' 'ಪ್ರಾರ್ಥನಾಪಾರಿಜಾತ' ಎಂಬ ಗ್ರಂಥಗಳನ್ನೂ ರಚಿಸಿದ್ದಾರೆ.

ಈ ಕಾಲದಲ್ಲಿಯೂ ಆಚಾರ್ಯರಿಗೆ ವಿಮತಸ್ಥರಿಂದ ತೊಂದರೆಯು ತಪ್ಪಲಿಲ್ಲ. ಅಸೂಯಾಪರರಾದ ಕೆಲವು ವಿಮತಸ್ಥರು ಶ್ರೀರಂಗಕ್ಕೆ ಬಂದು ಆಳ್ವಾರ್ರುಗಳ ದೇವತಾಂಶವನ್ನು ಸ್ಥಾಪಿಸಿದ ಹೊರತು ಶ್ರೀರಂಗನಾಥ ದೇವರ ಪೂಜೆಯು ನಡೆಯಕೂಡದೆಂದೂ ಅವರ ವಿಗ್ರಹಗಳು ದೇವ ಸ್ಥಾನದಲ್ಲಿರಕೂಡದೆಂದೂ ಅಧ್ಯಯನೋತ್ಸವಕಾಲದಲ್ಲಿ ಅವರ ಪ್ರಬಂಧ ಗಳನ್ನು ಪಾರಾಯಣಮಾಡಕೂಡದೆಂದೂ ಅಡ್ಡಿಮಾಡಿ ಹಟಹಿಡಿದರು. ಆಚಾರ್ಯರು ಅವರೊಡನೆ ವಾದಿಸಿ ಆಳ್ವಾರ್ರುಗಳ ದೇವತಾಂಶವನು ಸ್ಥಾಪಿಸಿ ರಂಗನಾಥಸ್ವಾಮಿಯ ಪೂಜೆಯು ಯಥಾವತ್ತಾಗಿ ನಡೆಯು ವಂತೆ ಮಾಡಿದರು.

ಈ ಕಾಲದಲ್ಲಿಯೇ ಒಬ್ಬ ಶಿಲ್ಪಿಯು ಬಂದು ವೇಂಕಟನಾಥರು ಸರ್ವತಂತ್ರಸ್ವತಂತ್ರರೆಂಬ ತಮ್ಮ ಬಿರುದನ್ನು ಉಳಿಸಿಕೊಳ್ಳಬೇಕಾದರೆ ತಮ್ಮ ವಿಗ್ರಹವೊಂದನ್ನು ಶಿಲೆಯಲ್ಲಿ ಕೆತ್ತಬೇಕೆಂದನಂತೆ. ಆಗ ಆಚಾರ್ಯರು ಭಗವಂತನನ್ನು ಧ್ಯಾನಿಸಿ ಅವನ ಕೃಪಾಕಟಾಕ್ಷದಿಂದ ಬಲಗಯ್ಯಿನಲ್ಲಿ ಜ್ಞಾನಮುದ್ರೆಯೂ ಎಡಗಯ್ಯಿನಲ್ಲಿ ಶ್ರೀಕೋಶವೂ ಉಳ್ಳ ತಮ್ಮ ವಿಗ್ರಹ ವನ್ನು ರಚಿಸಿದರಂತೆ. ಶಿಲ್ಪಿಯು ಆಶ್ಚರ್ಯಚಕಿತನಾಗಿ ಆ ವಿಗ್ರಹಕ್ಕೆ ತಾನೇ ಒಂದು ಸುಂದರವಾದ ಪೀಠವನ್ನು ಮಾಡಿಕೊಟ್ಟು ಆಚಾರ್ಯರ ಕ್ಷಮಾಪಣೆಯನ್ನು ಬೇಡಿಕೊಂಡುದಲ್ಲದೆ ವೈಷ್ಣವನಾದನಂತೆ. ಇದರ ಜ್ಞಾಪಕಾರ್ಥವಾಗಿ ಆಚಾರ್ಯರು 'ಶಿಲ್ಪಾರ್ಥಸಾರ'ವೆಂಬ ಗ್ರಂಥವನ್ನು ರಚಿಸಿದರಂತೆ. ಈ ಗ್ರಂಥವು ಈಗ ಉಪಲಬ್ಧವಾಗಿಲ್ಲ.

ಇದಾದ ಸ್ವಲ್ಪದಿವಸದಲ್ಲಿಯೇ ಅಂದರೆ ಶಾ. ಶ. ೧೨೯೨ನೆಯ ಸೌಮ್ಯಸಂವತ್ಸರದ ಕಾರ್ತಿಕ ಶುದ್ಧ ಪೌರ್ಣಮಿಗೆ ಸರಿಯಾದ ಕ್ರಿ.ಶ. ೧೩೬೯ನೆಯ ನವೆಂಬರ್ ೧೪ನೆಯ ತಾರೀಖಿನ ದಿವಸ ಆಚಾರ್ಯರು ಶ್ರೀರಂಗನಾಥನ ಆಜ್ಞಾನುಸಾರ ಆತನಲ್ಲಿ ಮನಸ್ಸನ್ನಿಟ್ಟು ಅವನನ್ನು ಧ್ಯಾನಿಸುತ್ತಾ ತಮ್ಮ ಮಕ್ಕಳಾದ ವರದಾಚಾರ್ಯರ ತೊಡೆಯಲ್ಲಿ ತಿರುಮುಡಿ

ಯನ್ನೂ ತಮ್ಮ ಶಿಷ್ಯರಾದ ಬ್ರಹ್ಮತಂತ್ರಸ್ವತಂತ್ರಜೀಯರ ತೊಡೆಯಲ್ಲಿ ತಿರುವಡಿಯನ್ನೂ ಇಟ್ಟು ಶ್ರೀರಂಗದ ಉತ್ತರವೀಧಿಯಲ್ಲಿ ತಮ್ಮ ನೂರನೆಯ ವರ್ಷದಲ್ಲಿ ಪರಂಧಾಮವನ್ನೈದಿದರು.[37]

ಇದುವರೆಗೆ ತಿಳಿಸಿರುವ ಆಚಾರ್ಯರ ಸಂಕ್ಷಿಪ್ತಚರಿತ್ರೆಯಿಂದ ಆಚಾರ್ಯರ ವ್ಯಕ್ತಿತ್ವವು ಮುಂದಟ್ಟಾಗಿರಬೇಕು. ಅವರು ಅದ್ವಿತೀಯಪಂಡಿತರು ಅತಿಮೇಧಾವಿಗಳು ; ಸರ್ವಶಾಸ್ತ್ರಪಾರಂಗತರು; ಭಗವದ್ಭಕ್ತರ ವಿಷಯದಲ್ಲಿ ಅತಿಶಯವಾದ ಭಕ್ತಿಯುಳ್ಳವರು. "ಕರ್ಮಾವಲಂಬಕಾಃ ಕೇಚಿತ್ ಕೇಚಿತ್ ಜ್ಞಾನಾವಲಂಬಕಾಃ । ವಯಂತುಹರಿದಾಸಾನಾಂ ಪಾದರಕ್ಷಾವಲಂಬಕಾಃ" ಎಂಬುದಾಗಿ ಒಂದು ಸಂದರ್ಭದಲ್ಲಿ ಅನುಸಂಧಾನಮಾಡಿದರು. ಅವರ ಜೀವನವು ಅತ್ಯಂತ ಸಾಧಾರಣವಾದುದಾಗಿಯೂ ಬಹು ಪರಿಶುದ್ಧವಾದುದಾಗಿಯೂ ಇತ್ತು. ಅವರು ಖ್ಯಾತಿಲಾಭಪೂಜಾದಿಗಳಿಗೆ ವಿಮುಖರಾದವರು. ಅವರಿಗೆ ಸ್ವಾಭಿಮಾನವು ಲೇಶವಾದರೂ ಇರಲಿಲ್ಲ. ಯತ್ನವಿಲ್ಲದೆ ಇತರರ ಮೂಲಕ ಅಂತಹ ಸಂದರ್ಭವೊದಗಿದಾಗ,

ಅಹಂತೇ ನಾಹಂ ತೇ ವಿಹರಣಪದಂ ದೇಶಿಕಗಿರ
ಸ್ತ್ವದಂತೇನಃಸ್ವಾಂತೇ ಸಪದಿಗತಸಂದೇಹವಿಷಯಾಃ ।
ಅನಾಯಾಸಾಯಾಸಾಮಹಿಪತಿಶಯಾಸಾಭಗವತೀ
ಧರಾಧಾರಾಧಾರಾಧರನಿಕರ ಸಾಧಾರಣರುಚಿಃ ॥

---

37. ಆಚಾರ್ಯರ ಚರಮಶ್ಲೋಕವು ಸರ್ವರಿಗೂ ಅನುಸಂಧಾನಯೋಗ್ಯವಾಗಿರುವುದರಿಂದ ಕೆಳಗೆ ಕೊಟ್ಟಿದೆ.

ಅಬ್ದೇ ಸೌಮ್ಯೇಚ ವಾರೇ ಗತವತಿ ತರುಣಾವೃಶ್ಚಿಕಂ ಕೃತ್ತಿಕರ್ಕ್ಷೇ
ರಾಕಾಯಾಂ ಶ್ರೀವೇಂಕಟೇಶಃ ಯತಿನೃಪತಿಮತಂ ಸರ್ವತಃ ಸ್ಥಾಪಯಿತ್ವಾ ।
ವೇದಾಂತಾಚಾರ್ಯವರ್ಯೋ ವಿರಚಿತವಿವಿಧಾನೇಕದಿವ್ಯಪ್ರಬಂಧಃ
ಶ್ರೀಶೈಲಾಧೀಶಘಂಟಾಕೃತಿವಪುರಜಹದ್ದೇಶಿಕೇಂದ್ರೋದಯಾಳುಃ ॥

ಶ್ರೀಧೀಯೋಗ್ಯೇಕಕೇ ಶುಕ್ಲೇ ಉದಭೂದ್ವೇಂಕಟೇಶ್ವರಃ ।
ಲಬ್ಧಪ್ರಾಯೇ ಶಕೇ ಪ್ರಾಯಾತ್ ಸೌಮ್ಯೇ ಸ ಪರಮಂ ಪದಂ ॥

(ಎಲ್ಲೈ ಅಹಂಕಾರವೇ ನಿನ್ನ ಹಿಸೋದಕ್ಕೆ ನಾನು ಸ್ಥಳವಲ್ಲ. ಏಕೆಂದರೆ ಭೂಮಿಗೆ ಆಧಾರನಾಗಿಯೂ, ನೀಲಮೇಘಶ್ಯಾಮನಾಗಿಯೂ, ಶೇಷಶಾಯಿಯಾಗಿಯೂ ಇರುವ ಭಗವಂತನನ್ನು ಅನಾಯಾಸವಾಗಿ ದೊರಕಿಸಿಕೊಡುವ ಆಚಾರ್ಯಸೂಕ್ತಿಗಳನ್ನು ನನ್ನ ಮನಸ್ಸು ಆಸ್ವಾದ ಮಾಡುತ್ತಿದೆ) ಎಂದು ಅನುಸಂಧಾನ ಮಾಡುತ್ತಿದ್ದರು. ಅವರ ವೈರಾಗ್ಯವು ಜಗತ್ಪ್ರಸಿದ್ಧವಾದುದು. ಅವರು ಸರ್ವದಾ ಪೂರ್ವಾಚಾರ್ಯರಲ್ಲಿ ವಿಶೇಷ ಗೌರವವನ್ನಿಟ್ಟುಕೊಂಡು ಅವರ ಗ್ರಂಥಾವಲೋಕನವನ್ನು ಮಾಡುತ್ತಾ,

**ನಿರ್ವಿಷ್ಟಂ ಯತಿಸಾರ್ವಭೌಮವಚಸಾಮಾವೃತ್ತಿಭಿರ್ಯೌವನಂ**
**ನಿರ್ಧೂತೇತರಪಾರತಂತ್ರನಿರಯಾ ನೀತಾಃ ಸುಖಂ ವಾಸರಾಃ ।**
**ಅಂಗೀಕೃತ್ಯಸತಾಂ ಪ್ರಸತ್ತಿಮಸತಾಂ ಗರ್ವೋಽಪಿ ನಿರ್ವಾಪಿತಃ**
**ಶೇಷಾಯುಷ್ಯಪಿ ಶೇಷಿದಂಪತಿದಯಾ ದೀಕ್ಷಾಮುದೀಕ್ಷಾಮಹೇ ॥**

(ಯತಿಸಾರ್ವಭೌಮರಾದ ರಾಮಾನುಜಾಚಾರ್ಯರ ಗ್ರಂಥಗಳನ್ನು ಪುನಃ ಪುನಃ ಆವೃತ್ತಿಮಾಡುವುದರಲ್ಲಿಯೇ ನನ್ನ ಯವ್ವನವನ್ನೆಲ್ಲಾ ಕಳೆದೆನು. ಸೇವಾವೃತ್ತಿಯ ದುಃಖವನ್ನು ತಿರಸ್ಕರಿಸಿ ನನ್ನ ದೀರ್ಘವಾದ ಜೀವಮಾನವನ್ನು ಸುಖವಾಗಿ ಕಳೆದೆನು. ಮಹಾತ್ಮರ ಇಷ್ಟಕ್ಕನುಗುಣವಾಗಿ ಮತಾಂತರದವರ ಅಹಂಕಾರವನ್ನು ಅಡಗಿಸಿದೆನು. ಉಳಿದ ಜೀವಮಾನಕಾಲದಲ್ಲಿ ತನ್ನ ಭಕ್ತರನ್ನು ಸಂಸಾರದಿಂದ ವಿಮುಕ್ತರನ್ನಾಗಿ ಮಾಡಿ ಕಾಪಾಡುವ ಭಗವಂತನ ಪ್ರತಿಜ್ಞೆಯು ಸಫಲವಾಗುವುದನ್ನು ನಿರೀಕ್ಷಿಸುತ್ತಿದ್ದೇನೆ) ಎಂದು ಅನುಸಂಧಾನಮಾಡುತ್ತಿದ್ದುದಲ್ಲದೆ,

**ಯತಿಪ್ರವರಭಾರತೀರಸಭರೇಣ ನೀತಂ ವಯಃ**
**ಪ್ರಫುಲ್ಲಪಲಿತಂ ಶಿರಃ ಪರಮಿಹಕ್ಷಮಂ ಪ್ರಾರ್ಥಯೇ ।**
**ನಿರಸ್ತರಿಪುಸಂಭವೇ ಕ್ವಚನರಂಗಮುಖ್ಯೇ ವಿಭೋ**
**ಪರಸ್ಪರಹಿತೈಷಿಣಾಂ ಪರಿಸರೇಷು ಮಾಂ ವರ್ತಯ ॥**

(ರಾಮಾನುಜಾಚಾರ್ಯರ ಸೂಕ್ತಿಗಳ ರಸಾಸ್ವಾದನವನ್ನು ಮಾಡುತ್ತ ನನ್ನ ಆಯಸ್ಸನ್ನು ಕಳೆದೆನು. ತಲೆಯು ಬೆಳ್ಳಗಾಯಿತು. ಹಗೆತನವಿಲ್ಲದ ಜನಗಳುಳ್ಳ ಶ್ರೀರಂಗವೇ ಮೊದಲಾದ ಯಾವುದಾದರೂ ಒಂದು ದಿವ್ಯ ದೇಶದಲ್ಲಿ ಪರಸ್ಪರ ಹಿತಚಿಂತಕರ ಸಮೀಪದಲ್ಲಿರುವಂತೆ ಮಾಡು ಎಂದು ಸರ್ವದಾ ಭಗವಂತನನ್ನು ಪ್ರಾರ್ಥಿಸುತ್ತಿದ್ದರು.) ಆಚಾರ್ಯರಿಗೆ ರಾಮಾನುಜರಂತೆಯೇ ಶಠಕೋಪರ ವಿಷಯದಲ್ಲಿಯೂ ಅತ್ಯತಿಶಯವಾದ ಭಕ್ತಿ. ದ್ರವಿಡೋಪನಿಷತ್ತಾತ್ಪರ್ಯರತ್ನಾವಳಿಯ ಆರಂಭದಲ್ಲಿ ಶಠಕೋಪರ ಗ್ರಂಥವಾದ ತಿರುವಾಯ್ಮೊಳಿಯ ಶ್ರೇಷ್ಠತ್ವವನ್ನು ಹೀಗೆ ವರ್ಣಿಸಿದ್ದಾರೆ.

**ಸಾರಸ್ಸಾರಸ್ವತಾನಾಂ ಶಠರಿಪುಭಣಿತಿಃ ಶಾನ್ತಿಶುದ್ಧಾನ್ತಸೀಮಾ**
**ಮಾಯಾಮಾಯಾಮಿನೀಭಿಸ್ಸ್ವಗುಣವಿತತಿಭಿರ್ಬನ್ಧಯನ್ತೀಂ ಧಯನ್ತೀ ।**
**ಪಾರಂ ಪಾರಂಪರೀತೋ ಭವಜಲಧಿಭವನ್ಮಜ್ಜನಾನಾಂ ಜನಾನಾಂ**
**ಪ್ರತ್ಯಕ್ ಪ್ರತ್ಯಕ್ಷಯೇನ್ನಃ ಪ್ರತಿನಿಯತರಮಾಸನ್ನಿಧಾನಂ ನಿಧಾನಮ್ ॥**

ಅವರ ನಮ್ರತೆಯೂ ಲೋಕಪ್ರಸಿದ್ಧವಾದುದು. ಆದರೆ ಅನ್ಯ ಮತಾವಲಂಬಿಗಳ ವಿಷಯದಲ್ಲಿ ಮಾತನಾಡುವಾಗ ವಿಶೇಷವಾದ ಸ್ವಾಭಿಮಾನವೂ ಉದ್ಧತವಾಕ್ಯೂ ಇರುವಂತೆ ಕಂಡುಬಂದರೂ ಅವು ರಾಮಾನುಜ ಸಿದ್ಧಾಂತದ ಮೇಲ್ಮೆಯನ್ನು ತೋರಿಸುವುದಕ್ಕಾಗಿಯೇ ವಿನಾ ತಮ್ಮ ಅಹಂಕಾರದಿಂದಾಡಿದುವಲ್ಲ. ಅವರು ದಕ್ಷಿಣಪಥದವರನ್ನೆಂದಿಗೂ ದ್ವೇಷಿಸಿದವರಲ್ಲ. ಮಧ್ವಮತವನ್ನು ಕೂಡ 'ಮತ್ಸನ್ನಿಕೃಷ್ಟಂ ಮತಂ' ಎಂಬುದಾಗಿ ಒಂದೆಡೆಯಲ್ಲಿ ಹೇಳಿದ್ದಾರೆ. ಅವರು ಉತ್ತಮವರ್ಗದ ಉಪದೇಶಕರು. ಉಪದೇಶಕರ ಲಕ್ಷಣವನ್ನು ಆಚಾರ್ಯರೇ ತಮ್ಮ ನ್ಯಾಸವಿಂಶತಿಯ ಪ್ರಾರಂಭದಲ್ಲಿ ಹೀಗೆಂದು ವರ್ಣಿಸಿದ್ದಾರೆ.

**ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ**
**ಸತ್ತ್ವಸ್ಥಂ ಸತ್ಯವಾಚಂ ಸಮಯನಿಯತಯಾ ಸಾಧುವೃತ್ತ್ಯಾ ಸಮೇತಮ್ ।**
**ಡಮ್ಭಾಸೂಯಾದಿಮುಕ್ತಂ ಜಿತವಿಷಯಗಣಂ ದೀರ್ಘಬನ್ಧುಂ ದಯಾಳುಂ**
**ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ ದೇಶಿಕಂ ಭೂಷ್ಣುರೀಪ್ಸೇತ್ ॥**

ಈ ಎಲ್ಲ ಗುಣಗಳೂ ಅವರಲ್ಲಿದ್ದುವು. ಆಚಾರ್ಯರ ದಿನಚರಿಯನ್ನು ಪೂರ್ಣವಾಗಿ ತಿಳಿದವರಿಗೆ ಈ ಶ್ಲೋಕದಲ್ಲಿ ಹೇಳಿರುವ ಲಕ್ಷಣಗಳು ಅವರನ್ನೇ ಕುರಿತು ಬರೆದಂತಿವೆ.

ಆಚಾರ್ಯರು ಪರಮದಯಾಳುಗಳು. ಚೇತನಗಳಿಗೇ ಅಲ್ಲದೆ ಅಚೇತನಗಳಿಗೂ ಕೂಡ ಮೋಕ್ಷವನ್ನುಂಟುಮಾಡಬೇಕೆಂಬುದು ಅವರ ಆಶೆಯಾಗಿದ್ದಂತೆ ತೋರುತ್ತದೆ. ಈ ದೃಷ್ಟಿಯಿಂದ ಅವರು ತಿರುವಹೀಂದ್ರಪುರದಲ್ಲಿ ತಪಸ್ಸುಮಾಡುತ್ತಿದ್ದಾಗ ಅವರ ಪಾರಣೆಗೆ ಅಗಸೆಯಸೊಪ್ಪನ್ನು ಒದಗಿಸುತ್ತಿದ್ದ ಆಗಸೆಯ ಮರಕ್ಕೆ ಮೋಕ್ಷವನ್ನು ಕೊಡಿಸಿದರೆಂಬ ವಿಷಯವು ಸುಮಾರು ೧೫ನೆಯ ಶತಮಾನದ ಪೂರ್ವಾರ್ಧದಲ್ಲಿ ವಿಜಯನಗರದ ಅರಸಾದ ಕೃಷ್ಣದೇವರಾಯನಿಂದ ರಚಿತವಾದ 'ಆಮುಕ್ತಮಾಲ್ಯದ' ಎಂಬ ತೆಲುಗು ಮಹಾಕಾವ್ಯದಲ್ಲಿ ಈ ರೀತಿ ಉಕ್ತವಾಗಿದೆ:—

'ಮಱಿಯು ಹಯವದನಪದಾರಾಧಕುಂಡೈ ವೇಂಕಟೇಶುಂಡನು ಸೇಂಕೊಕ್ಕ ಮನೀಷಿ ಮಧುಮಥನ ಮತಪ್ರತಿಪಾದಕಂಬಗು ಪ್ರಬಂಧ ಶತಂಬು ರಚಿಂಚಿ ಶಿಲೋಂಛವರ್ತನಂಬುನಂ ದಸಂಬು ಸೇಯುಂ ದನುಕು ಜರಚ್ಛದನ ಶಾಕದಾನಂಬು ಸೇಯು ನಗಸ್ತ್ರೀಲ್ಪ್ರೀರುಹಂಬುನಕು ನಿರ್ವಾಣಂ ಬೊಸಂಗಂಗಲಂ.*

## ಆಚಾರ್ಯರ ಗ್ರಂಥಗಳು

ವೇಂಕಟನಾಥರ ಗ್ರಂಥರಾಶಿಯು ಎಂತಹವನನ್ನಾದರೂ ಆಶ್ಚರ್ಯಗೊಳಿಸುತ್ತದೆ. ಅತಿಮಾನುಷಶಕ್ತಿಯುವನಿಗೂ ಕೂಡ ಇಷ್ಟು ಗ್ರಂಥಗಳನ್ನು ಒಂದು ಪುರುಷಾಯುಸ್ಸಿನಲ್ಲಿ ರಚಿಸುವುದು ಕಷ್ಟ. ಗ್ರಂಥಬಾಹುಳ್ಯವೇ ಅಲ್ಲದೆ ಗ್ರಂಥದಲ್ಲಿ ವೈವಿಧ್ಯವಿದೆ. ಅವು ಅನೇಕಶಾಸ್ತ್ರಗಳನ್ನೊಳಗೊಂಡು

*ಈ ವಿಷಯವನ್ನು ತಿಳಿಸಿದ ಶ್ರೀಮಾನ್ ಪಂಡಿತ ಆರ್. ಅನಂತಕೃಷ್ಣಶರ್ಮರಿಗೆ ನಾನು ಚಿರಋಣಿಯಾಗಿದ್ದೇನೆ.

ವಿವಿಧ ಭಾಷೆಗಳಲ್ಲಿರತಕ್ಕವುಗಳು. ಅವರು ಒಟ್ಟು ೧೨೦ ಗ್ರಂಥಗಳನ್ನು
ರಚಿಸಿದ್ದಾರೆ. ಇವುಗಳಲ್ಲಿ 'ಹಂಸಸಂದೇಶ' 'ಯಾದವಾಭ್ಯುದಯ'
ಮತ್ತು 'ಸುಭಾಷಿತನೀವೀ' ಎಂಬ ಮೂರು ಕಾವ್ಯಗಳು; 'ಸಂಕಲ್ಪ
ಸೂರ್ಯೋದಯ'ವೆಂಬ ನಾಟಕ, ೩೨ ಸ್ತೋತ್ರಗಳು, ಅನುಷ್ಠಾನಗ್ರಂಥ
ಗಳು, 'ಮೀಮಾಂಸಾಪಾದುಕಾ' 'ಸೇಶ್ವರಮೀಮಾಂಸಾ' ಎಂಬ
ಮೀಮಾಂಸಗ್ರಂಥಗಳು; 'ತತ್ತ್ವಮುಕ್ತಾಕಲಾಪ', 'ಸರ್ವಾರ್ಥಸಿದ್ಧಿ'
'ನ್ಯಾಯಸಿದ್ಧಾಂಜನ' 'ನ್ಯಾಯಪರಿಶುದ್ಧಿ' 'ಪರಮತಭಂಗ' ಎಂಬ
ವೇದಾಂತಪ್ರಕರಣಗ್ರಂಥಗಳು; ೫ ಶಾರೀರಕ ಭಾಷ್ಯಪ್ರಸ್ಥಾನಗ್ರಂಥಗಳು;
ಈಶಾವಾಸ್ಯೋಪನಿಷದ್ಭಾಷ್ಯವಾದ ಉಪನಿಷತ್ ಪ್ರಸ್ಥಾನಗ್ರಂಥ, ಗೀತಾ
ಪ್ರಸ್ಥಾನಗ್ರಂಥಗಳೆರಡು, ರಹಸ್ಯಗಳು ೩೭, ಭಗವದ್ವಿಷಯಕಗ್ರಂಥಗಳು
ಮೂರು, ಪ್ರಬಂಧಗಳು ೨೪; 'ರಸಭೌಮಾಮೃತಂ' 'ವೃಕ್ಷಭೌಮಾ
ಮೃತಂ' ಎಂಬ ವೈದ್ಯಶಾಸ್ತ್ರಗ್ರಂಥಗಳು. 'ಭೂಗೋಳನಿರ್ಣಯ' ಮತ್ತು
ಅದರ ವ್ಯಾಖ್ಯಾನ ಮತ್ತು 'ಶಿಲ್ಪಾರ್ಥಸಾರ' ಇವು ಮುಖ್ಯವಾದುವು.

ಆಚಾರ್ಯರ ಗ್ರಂಥಗಳು ವಿಶೇಷವಾಗಿ ಲೋಕಪ್ರಿಯವಾಗದಿರುವು
ದಕ್ಕೆ ಅವು ಸಾಮಾನ್ಯವಾಗಿ ಏಕಸಂಪ್ರದಾಯಕ್ಕೆ ಸೇರಿರುವುದೇ ಮುಖ್ಯ
ಕಾರಣ. ಎಂದಮಾತ್ರಕ್ಕೆ ಅವರ ಭಾವನೆಗಳು ಸಂಕುಚಿತವಾಗಿತ್ತೆಂದಾಗಲಿ
ಅವರು ಧರ್ಮೋನ್ಮತ್ತತೆಯಿಂದ ಲೌಕಿಕವಿಷಯದಲ್ಲಿ ಅಂಧರಾಗಿದ್ದರೆಂ
ದಾಗಲಿ ಅರ್ಥವಲ್ಲ. ಅನ್ಯಮತೀಯರಿಂದ ಸಿದ್ಧಾಂತವೇ ನಾಶವಾಗಿ
ಹೋಗುವ ಸಂಭವವೊದಗಿದ್ದ ಆ ಕಾಲದಲ್ಲಿ ಸೂಕ್ಷ್ಮಮತಿಗಳೂ ವಿವಾದ
ಕುಶಲರೂ ಆದ ಆಚಾರ್ಯರು ಸ್ವಪಕ್ಷವನ್ನು ಹಿಡಿದು ಅದರ ಮೇಲ್ಮೆ
ಯನ್ನು ತೋರ್ಪಡಿಸುವುದು ಅವಶ್ಯಕವಾಯಿತು. ನಾನಾಶಾಸ್ತ್ರಗಳನ್ನು
ಕೂಲಂಕಷವಾಗಿ ಅಭ್ಯಾಸಮಾಡಿದ್ದರೂ ಆ ಕಾಲದ ಆವಶ್ಯಕತಾದೃಷ್ಟಿ
ಯಿಂದ ಆ ಎಲ್ಲ ಜ್ಞಾನವನ್ನು ಸ್ವಪಕ್ಷಸಮರ್ಥನದಲ್ಲಿಯೇ ಉಪಯೋಗಿ
ಸಿಕೊಳ್ಳಬೇಕಾಯಿತು. ಆದರೂ ಅವರ ಕವಿತಾಶಕ್ತಿಯೂ ಭಕ್ತಿಯು

ವ್ಯಗ್ರತೆಯೂ ಆಧ್ಯಾತ್ಮದೃಷ್ಟಿಯ ಮೇಲ್ಮೆಯೂ, ಉಪದೇಶದ ಸರಳತೆಯೂ ಎಂತಹವನನ್ನಾದರೂ ಆಶ್ಚರ್ಯಗೊಳಿಸುತ್ತವೆ. ಆಳ್ವಾರ್ರುಗಳು ಈಶ್ವರ ಸಾಕ್ಷಾತ್ಕಾರಿಗಳೂ ಅನುಭಾವಿಗಳೂ, ರಾಮಾನುಜಾಚಾರ್ಯರು ವಿಮರ್ಶಕರೂ ಸಿದ್ಧಾಂತಸ್ಥಾಪಕರೂ ಆಗಿದ್ದ ಹಾಗೆ ದೇಶಿಕರು ಉಪದೇಶಕರೂ ಸಿದ್ಧಾಂತಪ್ರಚಾರಕರೂ ಆಗಿದ್ದಾರೆ. ಪೂರ್ವಾಚಾರ್ಯರ ಸಿದ್ಧಾಂತಗಳನ್ನು ಸರ್ವಜನಪ್ರಿಯವಾಗುವಂತೆ ಮಾಡಿದ್ದಾರೆ.

ಆಚಾರ್ಯರ ಶಾಸ್ತ್ರ ಮತ್ತು ಸಂಪ್ರದಾಯ ಗ್ರಂಥಗಳನ್ನು ಈ ಸಣ್ಣ ಪ್ರಬಂಧದಲ್ಲಿ ವಿಮರ್ಶೆಮಾಡಿ ಅವರ ಮೇಲ್ಮೆಯನ್ನು ತೋರಿಸುವುದು ಅಸಾಧ್ಯವಾದ ಕೆಲಸವಾದುದರಿಂದ ಅವರ ಕವಿತಾಶಕ್ತಿಯನ್ನು ಪ್ರಕಾಶಪಡಿಸುವ ಕಾವ್ಯಗ್ರಂಥಗಳನ್ನು ಮಾತ್ರ ಮುಂದೆ ಪ್ರಸ್ತಾಪಿಸಿದೆ.

ದೇಶಿಕರವರ ಸ್ತೋತ್ರಗಳು ಉತ್ತಮ ಕವಿತಾಲಕ್ಷಣಗಳಿಂದ ಕೂಡಿದ ಭಾವಗೀತೆಗಳು. ಅವುಗಳಲ್ಲಿ ಅನೇಕವು ದಿವ್ಯದೇಶಗಳ ದೇವರುಗಳ ವಿಷಯವಾದುವು. ಕೆಲವು ಮಾತ್ರ ವೇದಾಂತ ವಿಷಯವನ್ನು ಪ್ರತಿಪಾದಿಸತಕ್ಕವು. ಈ ಸ್ತೋತ್ರಗಳಲ್ಲಿ ಆಚಾರ್ಯರ ಕವಿತೆಯ ವಿವಿಧಶೈಲಿಗಳನ್ನು ನೋಡಬಹುದು. 'ಗೋಪಾಲವಿಂಶತಿ'ಯ ಕೆಳಗಿನ ಎರಡು ಶ್ಲೋಕಗಳು ಲಾಲಿತ್ಯದ ಪರಮಾವಧಿಯನ್ನು ಬೀರುವುವೆ—

ಹರ್ತುಂ ಕುಂಭೇ ವಿನಿಹಿತಕರಸ್ಸ್ವಾದು ಹೈಯಂಗವೀನಂ
ದೃಷ್ಟ್ವಾ ದಾಮಗ್ರಹಣಚಟುಲಾಂ ಮಾತರಂ ಜಾತರೋಷಾಮ್ ।
ಪಾಯಾದೀಷತ್ಪ್ರಚಲಿತಪದೋ ನಾಪಗಚ್ಛನ್ನತಿಷ್ಠನ್
ಮಿಥ್ಯಾಗೋಪಸ್ಸಪದಿನಯನೇ ಮೀಲಯನ್ ವಿಶ್ವಗೋಪ್ತಾ ।

ವಾಸೋ ಹೃತ್ವಾ ದಿನಕರಸುತಾಸನ್ನಿಧೌ ವಲ್ಲವೀನಾಂ
ಲೀಲಾಸ್ಮೇರೋ ಜಯತಿ ಲಲಿತಾಮಾಸ್ಥಿತಃ ಕುನ್ದಶಾಖಾಮ್ ।
ಸವ್ರೀಡಾಭಿಸ್ತದನು ವಸನೇ ತಾಭಿರಭ್ಯರ್ಥ್ಯಮಾನೇ
ಕಾಮೀ ಕಶ್ಚಿತ್ಕರಕಮಲಯೋರಞ್ಜಲಿಂ ಯಾಚಮಾನಃ ॥

ಇವುಗಳಲ್ಲಿ ಕೃಷ್ಣನು ಬೆಣ್ಣೆಯನ್ನು ಕದಿಯುವ ಸನ್ನಿವೇಶವೂ ಗೋಪಿಯರು ವಸ್ತ್ರವನ್ನು ಯಾಚಿಸುವ ಸನ್ನಿವೇಶವೂ ಬಹು ಲಲಿತವಾಗಿ ವರ್ಣಿಸಲ್ಪಟ್ಟಿವೆ. ಹಾಗೆಯೇ ಅವರ ಕಠಿಣ ಶೈಲಿಯನ್ನು 'ವೈರಾಗ್ಯಪಂಚಕ'ದ ಈ ಕೆಳಗಿನ ಶ್ಲೋಕದಲ್ಲಿ ನೋಡಬಹುದು.

ಜ್ವಲತು ಜಲಧಿಕ್ರೋಡಕ್ರೀಡತ್ಕೃಪೀಟಭವಪ್ರಭಾ-
ಭರಪಟುತರಜ್ವಾಲಾಮಾಲಾಕುಲೋ ಜಠರಾನಲಃ ॥
ತೃಣಮಪಿ ವಯಂ ಸಾಯಂ ಸಂಫುಲ್ಲಮಲ್ಲಿಮತಲ್ಲಿಕಾ-
ಪರಿಮಳಮುಚಾ ವಾಚಾ ಯಾಚಾಮಹೇ ನ ಮಹೀಶ್ವರಾನ್ ॥

ಅವರ ಸ್ತೋತ್ರಗಳು ವಿಶೇಷವಾದ ಭಕ್ತಿರಸದಿಂದ ತುಂಬಿ ತುಳುಕಾಡುತ್ತಿವೆ. 'ವರದರಾಜಪಂಚಾಶತ್' ಸ್ತೋತ್ರದ ಈ ಕೆಳಗಿನ ಎರಡು ಶ್ಲೋಕಗಳು ಉತ್ತಮ ಉದಾಹರಣೆಗಳು.

ಭಕ್ತಸ್ಯ ದಾನವಶಿಶೋಃ ಪರಿಪಾಲನಾಯ
ಭದ್ರಾಂ ನೃಸಿಂಹಕುಹನಾಮಧಿಜಗ್ಮುಷಸ್ತೇ ।
ಸ್ತಮ್ಭೈಕವರ್ಜಮಧುನಾಪಿ ಕರೀಶ ನೂನಂ
ತ್ರೈಲೋಕ್ಯಮೇತದಖಿಲಂ ನರಸಿಂಹಗರ್ಭಮ್ ॥

ತ್ವಂ ಚೇತ್ಪ್ರಸೀದಸಿ ತವಾಸ್ಮಿ ಸಮೀಪತಶ್ಚೇತ್
ತ್ವಯ್ಯಸ್ತಿ ಭಕ್ತಿರನಘಾ ಕರಿಶೈಲನಾಥ ।
ಸಂಸೃಜ್ಯತೇ ಯದಿ ಚ ದಾಸಜನಸ್ತ್ವದೀಯಃ
ಸಂಸಾರ ಏಷ ಭಗವನ್ನಪವರ್ಗ ಏವ ॥

ಸ್ತೋತ್ರಗಳ ಕೆಲವು ಶ್ಲೋಕಗಳಲ್ಲಿ ಉಪನಿಷದ್ವಾಕ್ಯಗಳು ಉದಾಹೃತವಾಗಿರುವುದರಿಂದ ಅವಕ್ಕೆ ಒಂದು ಘನತೆಯುಂಟಾಗಿದೆ.— 'ಶ್ರೀಸ್ತುತಿ'ಯ ಮುಂದಿನ ಶ್ಲೋಕವನ್ನು ನೋಡಿ.

ಆಸ್ಲೇಶಾನಾ ತ್ವಮಸಿ ಜಗತಃ ಸಂಶ್ರಯನ್ತೀ ಮುಕುನ್ದಂ
ಲಕ್ಷ್ಮೀಃ ಪದ್ಮಾ ಜಲಧಿತನಯಾ ವಿಷ್ಣುಪತ್ನೀನ್ದಿರೇತಿ ।
ಯನ್ನಾಮಾನಿ ಶ್ರುತಿಪರಿಪಣಾನ್ಯೇವಮಾವರ್ತಯನ್ತೋ
ನಾವರ್ತನ್ತೇ ದುರಿತಪವನಪ್ರೇರಿತೇ ಜನ್ಮಚಕ್ರೇ ॥

ವೇದಾಂತಾಚಾರ್ಯರು ಭಗವಂತನಲ್ಲಿ ಅನನ್ಯಶರಣತ್ವವನ್ನು ಪ್ರಾರ್ಥಿಸುವುದು ಬಹು ಲಲಿತವಾಗಿಯೂ ಹೃದಯಂಗಮವಾಗಿಯೂ ಇವೆ. ಕಾಮಾಸಿಕಾಷ್ಟಕದ ಮುಂದಿನ ಶ್ಲೋಕವು ಇದಕ್ಕೆ ಉತ್ತಮ ನಿದರ್ಶನ.

**ತ್ವಯಿ ರಕ್ಷತಿ ರಕ್ಷಕೈಃ ಕಿಮನ್ಯೈಃ ತ್ವಯಿ ಚಾರಕ್ಷತಿ ರಕ್ಷಕೈಃ ಕಿಮನ್ಯೈಃ ।**
**ಇತಿ ನಿಶ್ಚಿತಧೀಃ ಶ್ರಯಾಮಿ ನಿತ್ಯಂ ನೃಹರೇ ವೇಗವತೀತಟಾಶ್ರಯಂ ತ್ವಾಮ್ ॥**

## ' ಯಾದವಾಭ್ಯುದಯ '

ವೇಂಕಟನಾಥರ ಕಾವ್ಯಗಳಲ್ಲಿ ' ಯಾದವಾಭ್ಯುದಯ ' ವೆಂಬುದು ಮಹಾಕಾವ್ಯ. ಇದರಲ್ಲಿ ೨೪ ಸರ್ಗಗಳಿವೆ. ಈ ಮಹಾಕಾವ್ಯಕ್ಕೆ ಪ್ರಖ್ಯಾತ ಪಂಡಿತರಾದ ಅಪ್ಪಯ್ಯದೀಕ್ಷಿತರು ವ್ಯಾಖ್ಯಾನವನ್ನು ರಚಿಸಿದ್ದಾರೆ. ಯಾದವಾಭ್ಯುದಯದ ಹನ್ನೆರಡು ಸರ್ಗಗಳು ಶ್ರೀರಂಗದ ವಾಣೀವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿತವಾಗಿವೆ. ಅಲ್ಲಿಂದ ಮುಂದಕ್ಕೆ ಮೈಸೂರು ಪ್ರಾಚ್ಯಕೋಶಾಗಾರದಲ್ಲಿ ಅಚ್ಚಾಗುತ್ತಲಿವೆ. ಇದರಲ್ಲಿ ಶ್ರೀಕೃಷ್ಣ ಚರಿತ್ರೆಯು ವರ್ಣಿತವಾಗಿದೆ. ಇದನ್ನು ರಚಿಸುವಾಗ ಆಚಾರ್ಯರು ಮಹಾಕವಿ ಕಾಳಿದಾಸನ ' ರಘುವಂಶ 'ವನ್ನೇ ಮಾದರಿಯಾಗಿಟ್ಟುಕೊಂಡಂತೆ ಕಾಣುತ್ತದೆ. ' ಯಾದವಾಭ್ಯುದಯ 'ಕ್ಕೂ ' ರಘುವಂಶ 'ಕ್ಕೂ ಅನೇಕ ವಿಷಯಗಳಲ್ಲಿ ಸಾಮ್ಯವಿದೆ. ಎರಡರಲ್ಲಿಯೂ ಮೊದಲೆರಡು ಸರ್ಗಗಳು ಒಂದೇವೃತ್ತದಲ್ಲಿವೆ. ಅನ್ತ್ಯಶ್ಲೋಕಗಳೂ ಹಾಗೆಯೇ. ಕಾವ್ಯದ ಶರೀರದಲ್ಲಿ ಬರುವ ಉಪಮಾನಗಳೂ ವರ್ಣನೆಗಳೂ ರಘುವಂಶವನ್ನು ಬಹುಮಟ್ಟಿಗೆ ಹೋಲುತ್ತವೆ. ಆದರೂ ಈ ಕಾವ್ಯದ ಪ್ರತಿಶ್ಲೋಕವೂ ಭಾವಗರ್ಭಿತವಾಗಿಯೂ ಪ್ರತಿಪದವೂ ಸ್ವಾರಸ್ಯಯುಕ್ತವಾಗಿಯೂ ಇದೆ. ' ಯಾದವಾಭ್ಯುದಯ 'ದ ವ್ಯಾಖ್ಯಾನಕಾರರಾದ ಅಪ್ಪಯ್ಯದೀಕ್ಷಿತರು ಮೊದಲನೆಯ ಸರ್ಗದ ಒಂಬತ್ತನೆಯ ಶ್ಲೋಕಕ್ಕೆ ವ್ಯಾಖ್ಯಾನವನ್ನು ರಚಿಸುವಾಗ ಹೀಗೆ ಹೇಳಿರುವರು-

ಇತ್ಥಂ ವಿಚಿನ್ತ್ಯಾಸ್ಸರ್ವತ್ರ ಭಾವಾಸ್ಸನ್ತಿ ಪದೇ ಪದೇ ।
ಕವಿತಾರ್ಕಿಕಸಿಂಹಸ್ಯ ಕಾವ್ಯೇಷು ಲಲಿತೇಷ್ವಪಿ ॥

(ಕವಿತಾರ್ಕಿಕಸಿಂಹರ ಕಾವ್ಯಗಳು ಎಷ್ಟು ಲಲಿತವಾಗಿದ್ದರೂ ಅವುಗಳ ಪ್ರತಿಪದದಲ್ಲಿಯೂ ಭಾವಗಳೂ ಅರ್ಥಗಳೂ ತುಂಬಿವೆ.)

ಆಚಾರ್ಯರಿಗೆ ಶಬ್ದಾಲಂಕಾರಗಳಾದ ಯಮಕ ಅನುಪ್ರಾಸಗಳಲ್ಲಿಯೂ ಚಿತ್ರಕವಿತೆಗಳಲ್ಲಿಯೂ ವಿಶೇಷ ಆಸಕ್ತಿ ಇದ್ದಂತೆ ತೋರುತ್ತದೆ. ಇದಕ್ಕೆ ಪಾಂಡಿತ್ಯಪ್ರದರ್ಶನಪ್ರವೃತ್ತಿಯೋ ಅಥವಾ ಆ ಕಾಲದ ಅಭಿರುಚಿಯೋ ಕಾರಣವಿರಬೇಕು. 'ಯಾದವಾಭ್ಯುದಯ'ದಲ್ಲಿ ಇವುಗಳನ್ನು ಅಲ್ಲಲ್ಲಿ ನೋಡಬಹುದು. 'ಪಾದುಕಾಸಹಸ್ರ'ದಲ್ಲಂತು ಚಿತ್ರಪದ್ಧತಿಯೆಂಬ ಒಂದು ಪ್ರಕರಣವೇ ಇದಕ್ಕೆ ವಿನ್ಯಾಸಲಾಗಿದೆ. ಇದರಲ್ಲಿರುವ ನಲವತ್ತು ಶ್ಲೋಕಗಳಲ್ಲಿ ನಲವತ್ತೈದು ಬಂಧಗಳಿವೆ---

ಆದರೆ ಈ ಚಿತ್ರಕವಿತೆಗಳು ಉದ್ದೇಶಪೂರ್ವಕವಾಗಿ ರಚಿಸಿದಂತೆ ಕಾಣುತ್ತವೆ. ಯಥಾವತ್ತಾಗಿ ಸರಳವಾಗಿ ಬರೆಯಬೇಕೆಂದು ಹೊರಟಾಗ ಸಂದರ್ಭಕ್ಕೆ ತಕ್ಕಂತೆ ಪದಪ್ರಯೋಗವೂ ಛಂದಸ್ಸಿನ ಯೋಜನೆಯೂ ಬಹುಮನೋಹರವಾಗಿರುತ್ತವೆ. ನೃಸಿಂಹಾವತಾರವನ್ನು ವರ್ಣಿಸುವಾಗ

'ಸಟಾಪಟಲಭೀಷಣೇ ಸರಭಸಾಟ್ಟಹಾಸೋದ್ಭಟೇ'

ಎಂಬ ಶ್ಲೋಕದಲ್ಲಿರುವ ರೌದ್ರರಸದ್ಯೋತಕವಾದ ಪದಬಂಧವೂ ಕೃಷ್ಣನು ಕಾಳಿಂಗಸರ್ಪದ ಹೆಡೆಯ ಮೇಲೆ ನಾಟ್ಯವಾಡುವುದನ್ನು ವರ್ಣಿಸುವ,

ಲೋಲಾಪತಚ್ಚರಣಲೀಲಾಹತಕ್ಷರಿತಹಾಲಾಹಲೇ ನಿಜಫಣೇ ।
ನೃತ್ಯನ್ತಮುಪ್ರತಿಘುಘುಷ್ಯನ್ತಮುಪ್ರತಿಮಮುತ್ಯನ್ತಚಾರು ವಪುಷಮ್ ॥

ಎಂಬ ಶ್ಲೋಕದ ನಾಟ್ಯಶೈಲಿಯು ಚಿತ್ತಾಕರ್ಷಕವಾಗಿದೆ.

ದೇಶಿಕರವರ ವರ್ಣನಾಶಕ್ತಿಯು ಅದ್ಭುತವಾದುದು. ಯಾದವಾಭ್ಯುದಯದಲ್ಲಿ ಸೂರ್ಯಚಂದ್ರರ ಉದಯಾಸ್ತಗಳ ಉಲ್ಲೇಖಗಳು ಬಹಳ ಸ್ವಾರಸ್ಯವಾಗಿವೆ.

ದೃಷ್ಟ್ವಾ ನಿಮೀಲಿತವತೀಂ ನಿಯತಿಪ್ರಭಾವಾತ್
ಆತ್ಮಪ್ರಿಯಾಂ ಕುಮುದಿನೀಮವಧೂತಧಾಮಾ ।
ಚ್ಯೋತತ್ತುಷಾರನಯನೋದಕಬಿನ್ದುರಿನ್ದುಃ
ಪ್ರಸ್ಥಾನಮಿಚ್ಛತಿ ಮಹತ್ಪ್ರತಿಪನ್ನದೈನ್ಯಃ ॥

ಆಮೃಶ್ಯ ರಾತ್ರಿಮರಣೋದಯಜಾತಪುಷ್ಪಾಂ
ಪ್ರಾಪ್ತಾನುತಾಪ ಇವ ಸತ್ಪಥಲಙ್ಘನೇನ ।
ಜ್ಯೋತ್ಸ್ನಾಂಶುಕಂ ದ್ವಿಜಪತಿಃ ಪರಿಧಾಯ ನೂನಂ
ವ್ರೀಡಾನತೋ ವಿಶತಿ ವಾರಿನಿಧಿಂ ವಿವರ್ಣಃ ॥

ಪರ್ಯಾಪ್ತರಶ್ಮಿನಿಕರೇಣ ಸುವೃತ್ತಭೂಮ್ನಾ
ಸೂರ್ಯೇನ್ದುಬಿಮ್ಬಯುಗಳೇನ ಸಮುಸ್ಥಿತೇನ ।
ಆಭಾತಿ ಕಾಲವಣಿಜಾ ಪರಿಕಲ್ಪ್ಯಮಾನಾ
ನಕ್ತಂದಿವಕ್ಷಣತುಲೇವ ನಭಸ್ತಲಶ್ರೀಃ ॥

ಮೇಲಿನ ಮೊದಲೆರಡು ಶ್ಲೋಕಗಳಲ್ಲಿ ಚಂದ್ರಾಸ್ತಮಯವನ್ನೂ ಮೂರನೆಯದರಲ್ಲಿ ಸಂಧ್ಯಾಸಮಯವನ್ನೂ ವರ್ಣಿಸಿರುವುದು ಎಷ್ಟು ಅಸಾಧಾರಣವಾಗಿದೆ! ಆಚಾರ್ಯರ ರೂಪಕಗಳೂ ಸ್ವಭಾವೋಕ್ತಿಯೂ ಮನಸ್ಸಿಗೆ ಹಿತವಾಗಿರುತ್ತವೆ.

ಪ್ರವಾಳವಹ್ನೌ ಪರಿದೀಪ್ಯಮಾನೇ
ಮುಂಚನ್ತ್ಯಸೌ ಮೌಕ್ತಿಕಲಾಜವರ್ಷಮ್ ।
ಅಮುಷ್ಯ ವೇಲಾ ಧೃತವೇಪಥುಸ್ತ್ರೀ
ವೈವಾಹಿಕೀಂ ಸ್ಮಾರಯತಿ ಸ್ಮ ವೇಳಾಮ್ ॥

ಇದು ಸಮುದ್ರವರ್ಣನೆ; ಇದರಲ್ಲಿ ವಿವಾಹಸಂಬಂಧವಾದ ರೂಪಕಗಳನ್ನು ಉಪಯೋಗಿಸಿರುವುದು ಕಾವ್ಯಪ್ರಪಂಚದಲ್ಲಿ ಒಂದು ಹೊಸಮಾರ್ಗ. ಹಾಗೆಯೇ ಮುಂದಿನ ಪದ್ಯದಲ್ಲಿ ಕೃಷ್ಣನು ಪ್ರೀತಿಯಿಂದ ಮೈತುಡಿಯುತ್ತಿರುವಾಗ ಇದ್ದ ಗೋವಿನ ಸ್ವಭಾವವು ಯಥಾವತ್ತಾಗಿ ವರ್ಣಿಸಿದೆ—

ರೋಮನ್ಥಫೇನಾಞ್ಚಿತ ಸೃಕ್ವಿಭಾಗೈಃ
ಅಸ್ಪನ್ದನೈರರ್ಧನಿಮೀಲಿತಾಕ್ಷೈಃ ।
ಅನಾದೃತಸ್ತನ್ಯರಸೈರ್ಮುಕುನ್ದಃ
ಕಂಡೂಯಿತೈರ್ನಿರ್ವೃತಿಮಾಪ ವತ್ಸೈಃ ॥

## 'ಹಂಸಸಂದೇಶ'

ವೇಂಕಟನಾಥರ 'ಹಂಸಸಂದೇಶ'ವೂ ಕಾಳಿದಾಸಕವಿಯ 'ಮೇಘ ಸಂದೇಶ'ದ ಮಾದರಿಯಲ್ಲಿಯೇ ಬರೆದ ಗ್ರಂಥ. ಇದರಲ್ಲಿ ಹನುಮಂತನು ಲಂಕಾನಗರಿಗೆ ಹೋಗಿ ಸೀತಾದೇವಿಯ ಸಮಾಚಾರವನ್ನು ತಿಳಿದು ಕೊಂಡು ಬಂದು ರಾಮನಿಗೆ ತಿಳಿಸಿದ ಮರುದಿವಸ ರಾಮನು ಸೀತಾ ದೇವಿಗೆ ಹಂಸದಮೂಲಕ ಸಂದೇಶವನ್ನು ಕಳುಹಿಸುವುದು ವರ್ಣಿತ ವಾಗಿದೆ. ಇದರ ಸಾಮಾನ್ಯಸ್ವರೂಪ, ಮೂಲರೀತಿ, ಛಂದಸ್ಸಿನ ಯೋಜನೆ ಇವೆಲ್ಲವೂ ಕಾಳಿದಾಸನವೇ. ಇದರಲ್ಲಿಯೂ ಮೇಘಸಂದೇಶ ದಂತೆಯೇ ವಿರಹವ್ಯಾಕುಲನಾದ ನಾಯಕನು ದೂತನನ್ನು ಆಕಸ್ಮಾತ್ತಾಗಿ ನೋಡುವುದು, ಬಹಳಕಾಲದಿಂದ ಅಗಲಿ ದೂರದೇಶದಲ್ಲಿರುವ ನಾಯಕಿ ಗಾಗಿ ನಾಯಕನು ದುಃಖಿಸುವುದು, ತಾನು ಬಂದು ಬಿಡಿಸಿಕೊಂಡು ಹೋಗುವವರೆಗೆ ಜೀವವನ್ನು ಉಳಿಸಿಕೊಂಡಿರುವಂತೆ ನಾಯಕನು ನಾಯಕಿಗೆ ಸುದ್ದಿಯನ್ನು ಕಳುಹಿಸುವುದು, ದೂತನಲ್ಲಿ ನಾಯಕನಿಗಿರುವ ಅವ್ಯಾಜವಾದ ಭ್ರಾತೃವಾತ್ಸಲ್ಯ, ದೂತನ ಔದಾರ್ಯದಲ್ಲಿಯೂ ಕಾರ್ಯದಕ್ಷತೆ ಯಲ್ಲಿಯೂ ನಾಯಕನಿಗಿರುವ ಪೂರ್ಣನಂಬಿಕೆ, ಶುಭಶಕುನಗಳು, ಮಾರ್ಗ ವಿವರಣೆ, ಮಾರ್ಗದಲ್ಲಿ ದೂತನಿಗೆ ಆಹ್ಲಾದವನ್ನುಂಟುಮಾಡತಕ್ಕ ಸನ್ನಿ ವೇಶಗಳ ವರ್ಣನೆ, ದಾರಿಯಲ್ಲಿ ಸಿಕ್ಕತಕ್ಕ ಪವಿತ್ರಕ್ಷೇತ್ರಗಳ ಉಲ್ಲೇಖ ಗಳು, ಪ್ರೇಯಸ್ಥಳದ ವರ್ಣನೆ. ದೂತನು ನಾಯಕಿಯನ್ನು ಹೋಗಿ ಸೇರುವ ಕಾಲದಲ್ಲಿ ಆಕೆಯು ಇರಬಹುದಾದ ಸ್ಥಿತಿ, ಈಗಾಗಲೇ ವಿಶೇಷ ವಾಗಿ ನೊಂದಿರುವ ನಾಯಕಿಗೆ ಮತ್ತಷ್ಟು ತೊಂದರೆಯುಂಟಾಗದಂತೆ

ಸಕಾಲದಲ್ಲಿ ದೂತನು ಸಮಾಚಾರವನ್ನು ಮುಟ್ಟಿಸಬೇಕೆಂಬ ನಾಯಕನ ತವಕ, ಮನೋಹರವಾದ ದೂಮ, ದೂತನ ದಕ್ಷತೆ ಮತ್ತು ಪ್ರಾಮಾಣಿಕತೆಯ ನಿದರ್ಶನ ಮತ್ತು ದೂತನಿಗೆ ಪ್ರಯಾಣಕಾಲದಲ್ಲಿ ನಾಯಕನು ಮಾಡುವ ಆಶೀರ್ವಾದ ಇವು ಉಕ್ತವಾಗಿವೆ. ಆದರೆ ಕಾಳಿದಾಸನ ಮೇಲಿನ ತಡಿಕೆಯನ್ನು ಉಪಯೋಗಿಸಿಕೊಂಡರೂ ವೇಂಕಟನಾಥರು ತಮ್ಮ ಪ್ರತಿಭಾಶಕ್ತಿಯಿಂದ ವಿವರಗಳಲ್ಲಿಯೂ ವರ್ಣನೆಗಳಲ್ಲಿಯೂ ಮಾರ್ಪಾಟುಮಾಡಿ ಕೆಲವೆಡೆಗಳಲ್ಲಿ ಮೂಲಗ್ರಂಥಕ್ಕಿಂತ ಹೆಚ್ಚು ಕಾಂತಿಯುಕ್ತವನ್ನಾಗಿ ಮಾಡಿ ಸರ್ವಾಂಗಸುಂದರವಾದ ಒಂದು ಸಂದೇಶಕಾವ್ಯವನ್ನು ರಚಿಸಿದ್ದಾರೆ.

ಕಾಳಿದಾಸನ ಮೇಘಸಂದೇಶದ ನಾಯಕನು ಸ್ವಾಧಿಕಾರದಿಂದ ಪ್ರಮತ್ತನಾಗಿ ತನ್ನ ವಾಸಸ್ಥಾನವಾದ ಕೈಲಾಸಪರ್ವತವನ್ನು ಬಿಟ್ಟು ದಕ್ಷಿಣದೇಶದಲ್ಲಿ ಕಾಲವನ್ನು ಕಳೆಯುತ್ತಿರುವನು. ವರ್ಷಾಕಾಲದ ಮೇಘಗಳು ದಕ್ಷಿಣದಿಂದ ಉತ್ತರಕ್ಕೆ ಹೋಗುತ್ತಿರುವುದನ್ನು ನೋಡಿ ಆತನಿಗೆ ತನ್ನ ಪ್ರಿಯೆಯ ಜ್ಞಾಪಕ ಬರುವುದು. ಹಂಸಸಂದೇಶದಲ್ಲಿಯಾದರೋ ನಾಯಕನು ಧೀರೋದಾತ್ತಗುಣಗಳಿಂದ ಕೂಡಿದ ಶ್ರೀರಾಮ. ಇಲ್ಲಿ ಸಂದೇಶವನ್ನು ಕಳುಹಿಸುವುದು ಶರದೃತುವಿನಲ್ಲಿ, ವರ್ಷಾಕಾಲವು ಮಳೆ, ಮೋಡ, ಗುಡುಗು ಮೊದಲಾದುವುಗಳಿಂದ ಕೂಡಿದ ಯಕ್ಷನ ಕಲಕಿದ ಮನಸ್ಸಿನ ಸ್ಥಿತಿಯನ್ನು ಸೂಚಿಸುವುದಾದರೆ ಅದಕ್ಕಿಂತ ಮೇಲಾಗಿ ಶರದೃತುವು ರಾಮನ ಪ್ರಶಾಂತವಾದ ಮನಸ್ಸಿಗೆ ಅನುಗುಣವಾಗಿದೆ. ಯಕ್ಷನು ಪ್ರಮತ್ತತೆಯಿಂದ ಪತ್ನಿಯನ್ನು ಕಳೆದುಕೊಂಡು ಆ ವಿರಹ ದುಃಖವನ್ನು ಸಹಿಸಲಾರದೆ ಸಂದೇಶವನ್ನು ಕಳುಹಿಸುತ್ತಾನೆ. ರಾಮನಾದರೊ ಪಿತೃವಾಕ್ಯಪರಿಪಾಲನೆಗಾಗಿಯೂ ಲೋಕಸಂರಕ್ಷಣೆಗಾಗಿಯೂ ಕಾಡಿಗೆ ಹೋಗಿ ಸೀತೆಯನ್ನು ಕಳೆದುಕೊಂಡು ತಾನೇ ಶೀಘ್ರವಾಗಿ ಬಂದು ಅವಳ ಬಂಧನವನ್ನು ಬಿಡಿಸುತ್ತೇನೆಂದು ಹೇಳಿ ಕಳುಹಿಸುತ್ತಾನೆ. ಯಕ್ಷನ ದೂತನಾದ

ಮೇಘಕ್ಕೂ ಅವನ ನಾಯಕಿಗೂ ಯಾವ ಸಾಮ್ಯವೂ ಇಲ್ಲ. ಆದರೆ ಹಂಸವು ಎಲ್ಲ ಗುಣದಲ್ಲಿಯೂ ಸೀತೆಯನ್ನೇ ಹೋಲುತ್ತದೆ. ಹಂಸವನ್ನು ನೋಡಿದ ತತ್ಕ್ಷಣವೇ ರಾಮನಿಗೆ ತನ್ನ ಪ್ರಿಯೆಯ ಸ್ಮರಣೆಯುಂಟಾಗಿ ಮೈಮರೆಯುವಂತಾಗುವುದು. ಇದರ ವರ್ಣನೆಯು ಈ ಕೆಳಗಿನ ಪದ್ಯದಲ್ಲಿ ಎಷ್ಟು ಸಮಂಜಸವಾಗಿದೆಯೆಂಬುದನ್ನು ನೋಡಬಹುದು.

**ತಸ್ಮಿನ್ ಸೀತಾಗತಿಮನುಗತೇ ತದ್ದುಕೂಲಾಙ್ಕಮೂರ್ತೌ**
**ತನ್ಮಞ್ಜೀರಪ್ರತಿಮನಿನದೇ ನ್ಯಸ್ತನಿಸ್ಪನ್ದದೃಷ್ಟಿಃ ।**
**ವೀರಶ್ಚೇತೋವಿಲಯಮಗಮತ್ ತನ್ಮಯಾತ್ಮಾ ಮುಹೂರ್ತಂ**
**ಶಙ್ಕೇ ತೀವ್ರಂ ಭವತಿ ಸಮಯೇ ಶಾಸನಂ ಮೀನಕೇತೋಃ ॥**

ಮೇಘಸಂದೇಶದಲ್ಲಿ ಯಕ್ಷನು ವಿಶೇಷವಾದ ವಿರಹದುಃಖದಿಂದ ಮೇಘದೂತನಿಗೆ ಸಂದೇಶವನ್ನು ತೆಗೆದುಕೊಂಡು ಹೋಗುವ ಶಕ್ತಿಯಿದೆಯೋ ಎಂಬುದನ್ನೂ ಲಕ್ಷಿಸದೆ ಅವನ ಶರಣುಹೊಗುವನು. ಆದರೆ ರಾಮನು—

**ವ್ಯಕ್ತೋತ್ಕರ್ಷೋ ಮಹತಿ ಭುವನೇ ವ್ಯೋಮಗಾನಾಂ ಪತಿಸ್ತ್ವಂ**
**ಸ್ಥಾನೇ ದೂತ್ಯಂ ತದಪಿ ಭವತಃ ಸಂಶ್ರಿತತ್ರಾಣಹೇತೋಃ ।**

ಎಂದು ಹೇಳಿ ದೂತಕೃತ್ಯವು ಹಂಸದ ಕರ್ತವ್ಯದಲ್ಲಿ ಸೇರಿದುದೆಂದು ಸೂಚಿಸುವನು. ಮೇಘಸಂದೇಶದ ನಾಯಕನು ವಿಧಿಯನ್ನು ನಿವಾರುವುದು ಅಸಾಧ್ಯವೆಂದು ಹೇಳಿ ತನ್ನ ಪ್ರಿಯೆಯನ್ನು ಸಮಾಧಾನಪಡಿಸುವನು. ಶ್ರೀರಾಮನಾದರೋ ಇಂತಹ ದುಃಖಪ್ರಾಪ್ತಿಯು ವಿಶೇಷವಾದುದಲ್ಲವೆಂದೂ ಇದನ್ನು ಹಿಂದೆ ಎಷ್ಟೋಮಂದಿ ಅನುಭವಿಸಿರುವರೆಂದೂ ಶೀಘ್ರದಲ್ಲಿಯೇ ನಿವಾರಣೆಯಾಗುವುದೆಂದೂ ತಿಳಿಸುವನು. ಮೇಘಸಂದೇಶದಲ್ಲಿ ಕವಿಯ ಜನ್ಮಸ್ಥಳವಾದ ಉಜ್ಜಯಿನಿಯು ದೂತನ ಮಾರ್ಗವನ್ನು ಬಿಟ್ಟು ಹೊರಗಿದೆ. ಹಂಸಸಂದೇಶದಲ್ಲಿ ಕಾಂಚೀಪುರವು ಮಾರ್ಗದಲ್ಲಿಯೇ ಇದೆ. ಮೇಘಸಂದೇಶದಲ್ಲಿ ಶೃಂಗಾರವು ಪ್ರಧಾನವಾದ ರಸ.

ಹಂಸಸಂದೇಶದಲ್ಲಿ ಪ್ರಾಸಂಗಿಕವಾಗಿ ಶೃಂಗಾರರಸವು ಬಂದರೂ ಶಾಂತಿ ರಸಕ್ಕೆ ಹೆಚ್ಚು ಪ್ರಾಶಸ್ತ್ಯವಿರುವಂತೆ ತೋರುತ್ತದೆ. ಆದುದರಿಂದಲೇ ಮೇಘದೂತದ ಮಾರ್ಗದಲ್ಲಿ ಸ್ತ್ರೀವರ್ಣನೆಗೆ ಪ್ರಾಧಾನ್ಯತೆ ಇದೆ. ಅವುಗಳ ಸ್ಥಾನದಲ್ಲಿ ಹಂಸಸಂದೇಶದಲ್ಲಿ ಪವಿತ್ರಸ್ಥಳಗಳ ವರ್ಣನೆಯಿದೆ.

ವಸ್ತುವಿನಂತೆ ವರ್ಣನೆಯಲ್ಲಿಯೂ ಮೇಘಸಂದೇಶದ ಪ್ರಭಾವವು ಹಂಸಸಂದೇಶದಲ್ಲಿ ಅಲ್ಲಲ್ಲಿಯೇ ಕಂಡುಬರುವುವು. ಹಂಸಸಂದೇಶದ

'ಅಭ್ರೂಭಙ್ಗೇಽಪ್ಯಧಿಕಸುಭಗೈರ್ನಿಶ್ಚಿತಾಂಗಃ ಕಟಾಕ್ಷೈಃ'

ಎಂಬ ಶ್ಲೋಕಾರ್ಥವು ಮೇಘಸಂದೇಶದ

'ಭ್ರೂವಿಲಾಸಾನಭಿಜ್ಞೈಃ ಪ್ರೀತಿಸ್ನಿಗ್ಧೈರ್ಜನಪದವಧೂಲೋಚನೈಃ
ಪೀಯಮಾನಃ'

ಎಂಬುದನ್ನೂ ಹಂಸಸಂದೇಶದ ಎರಡನೆಯ ಸರ್ಗದ ಮೊದಲನೆಯ ಶ್ಲೋಕವಾದ

ಲೀಲಾಖೇಲಂ ಲಲಿತಗಮನಾ ಶ್ಯಾಮನಾದಂ ಸಶಿಞ್ಜಾಃ
ಭಲ್ಲಾಕ್ಷಂ ತ್ವಾಂ ಸ್ಮರಶರದೃಶೋ ಗೌರನೂಪಾಣ್ಡುರಾಙ್ಗಾಃ ।
ಮುಗ್ಧಾಲಾಪಂ ಮಧುರವಚಸೋ ಮಾನಸಾರ್ಹಂ ಮನೋಜ್ಞಾಃ
ಯತ್ರಾನೀತಾಸ್ಸರಯುವತಯೋ ರಞ್ಜಯೇಯುಸ್ಸಮಕ್ಷಮ್ ॥

ಎಂಬುದು ಮೇಘಸಂದೇಶದ ಉತ್ತರ ಮೇಘದ ಮೊದಲನೆಯ ಶ್ಲೋಕವಾದ

ವಿದ್ಯುತ್ವಂತಂ ಲಲಿತವನಿತಾಃ ಸೇನ್ದ್ರಚಾಪಂ ಸಚಿತ್ರಾಃ
ಸಂಗೀತಾಯ ಪ್ರಹತಮುರಜಾಃ ಸ್ನಿಗ್ಧಗಂಭೀರಘೋಷಮ್ ।
ಅಂತಸ್ತೋಯಂ ಮಣಿಮಯಭುವಸ್ತುಂಗಮಭ್ರಂಲಿಹಾಗ್ರಾಃ
ಪ್ರಾಸಾದಾಸ್ತ್ವಾಂ ತುಲಯಿತುಮಲಂ ಯತ್ರ ತೈಸ್ತೈರ್ವಿಶೇಷೈಃ ॥

ಎಂಬ ಶ್ಲೋಕವನ್ನು ವೃತ್ತಜಾತಿಯಲ್ಲಿಯೂ ಭಾವದಲ್ಲಿಯೂ ಅನುಸರಿಸಿರುವುದು ಇದಕ್ಕೆ ಒಂದೆರಡು ನಿದರ್ಶನಗಳು.

ಆದರೂ ಹಂಸಸಂದೇಶದಲ್ಲಿ ಕವಿಯದೇ ಆದ ಮನೋಹರವಾದ ಅನೇಕ ವರ್ಣನೆಗಳಿವೆ. ರಾಜಹಂಸವು ಸಂದೇಶವನ್ನು ತೆಗೆದುಕೊಂಡು ಹೊರಡುವಾಗ ಅದಕ್ಕೆ ರಾಜೋಪಚಾರಗಳು ನಡೆಯುವ ಈ ಕೆಳಗಿನ ಶ್ಲೋಕಗಳನ್ನು ನೋಡಿ.

ಸೂಕ್ಷ್ಮಾಕಾರೈರ್ದಿನಕರಕರೈಃ ಕಲ್ಪಿತಾನ್ತಶ್ಶಲಾಕಾಃ
ಶಾರೋಪಾನ್ತಾಶ್ರಿತಮುಖಧನುಶ್ಶ್ರೀಷಜಿತ್ರಾಂಶುಕೇನ ।
ಊಢಾಃ ಪಶ್ಚಾದುಚಿತಗತಿನಾ ವಾಯುನಾ ರಾಜಹಂಸ
ಚ್ಛತ್ರಾಯೇರನ್ ನಭಸಿ ಭವತಶ್ಶಾರದಾ ವಾರಿವಾಹಾಃ ॥

ಆರಕ್ತಾನಾಂ ನವಮಧು ಶನೈರಾಪಿಬನ್ ಪದ್ಮಿನೀನಾಂ
ಕಾಲೋನ್ನಿದ್ರೇ ಕುವಲಯವನೇ ಘೂರ್ಣಮಾನಸ್ಸಲೀಲಮ್ ।
ಸ್ವಿನ್ನೋ ದಾನೈರ್ವಿಪಿನಕರಿಣಾಂ ಸೌಮ್ಯ ಸೇವಿಷ್ಯತೇ ತ್ವಾಂ
ಆಮೋದಾನಾಮಹಮಹಮಿಕಾಮಾದಿಶನ್ ಗನ್ಧವಾಹಃ ॥

ಇದರಲ್ಲಿರುವ ಪ್ರಕೃತಿವರ್ಣನೆಯು ಎಷ್ಟು ಹೃದಯಂಗಮವಾಗಿದೆ! ಉದಯಕಾಲದ ಸೂರ್ಯನನ್ನು ಉದ್ದೇಶಪೂರ್ವಕವಾಗಿ ನೋಡಿರುವ ಯಾರಿಗಾದರೂ ಮೊದಲನೆಯ ಶ್ಲೋಕದ ಸ್ವಾರಸ್ಯವು ಅರ್ಥವಾಗುವುದು.

ರಾಜಹಂಸದ ಮಾರ್ಗದಲ್ಲಿ ಕರ್ಣಾಟಾಂಧ್ರದೇಶಗಳು ಸಿಕ್ಕುವುವು. ಆ ದೇಶದ ಸ್ತ್ರೀಯರ ವರ್ಣನೆಯು ಮುಂದಿನ ಪದ್ಯದಲ್ಲಿ ಮನೋಹರವಾಗಿ ವರ್ಣಿಸಲ್ಪಟ್ಟಿದೆ.

ಇಕ್ಷುಚ್ಛಾಯೇ ಕಿಸಲಯಮಯಂ ತಲ್ಪಮಾತಸ್ಥುಷೀಣಾಂ
ಸಲ್ಲಾಪೈಸ್ತೈರ್ಮುದಿತಮನಸಾಂ ಶಾಲಿಸಂರಕ್ಷಿಕಾಣಾಂ ।
ಕರ್ಣಾಟಸ್ತ್ರೀಪ್ರಕೃತಿಕತನಶಾತ್ ಕರ್ಬುರೀ ಗೀತಿಭೇದೈಃ
ಮುಹ್ಯನ್ತೀನಾಂ ಮದನಕಲುಷಂ ಮೌಗ್ಧ್ಯಮಾಸ್ವಾದಯೇಥಾಃ ।

ಅಲ್ಲಿಂದ ಮುಂದಕ್ಕೆ ಪ್ರಯಾಣಮಾಡಲು ಶೇಷಾದ್ರಿಯೂ ಸುವರ್ಣಮುಖರೀನದಿಯೂ ಸಿಕ್ಕುವುವು. ಸುವರ್ಣಮುಖರಿಯ ಮತ್ತು ಅದರಿಂದ ಮುಂದೆ ಬರುವ ಕಾವೇರೀನದಿಯ ವರ್ಣನೆಗಳು ಬಹಳ ಧ್ವನಿಯುಕ್ತವಾಗಿವೆ.

**ಸ್ರೋತೋನ್ಮಗ್ನಸ್ಫುರಿತಪುಲಿನಾಂ ತ್ವನ್ನಿವಾಸೇಚ್ಛಯೇವ**
**ದ್ರಕ್ಷ್ಯಸ್ಯಾರಾತ್ ಕನಕಮುಖರೀಂ ದಕ್ಷಿಣಾಮಞ್ಜನಾದ್ರೇಃ ।**
**ಆಸನ್ನಾನಾಂ ವನವಿಟಪಿನಾಂ ವೀಚಿಹಸ್ತೈಃ ಪ್ರಸೂನಾ-**
**ನ್ಯರ್ಘಾಹೇತೋರುಪಹರತಿ ಯಾ ನೂನಮರ್ಧೇನ್ದುಮೌಳೇಃ ॥**

**ಸಹ್ಯೋತ್ಸಙ್ಗಾತ್ಸಪದಿ ಮರುತಾ ಸಾಗರಂ ನೀಯಮಾನಾಂ**
**ಭದ್ರಾಲಾಪೈರ್ವಿಹಿತಕುಶಲಾಂ ತ್ವಾದೃಶಾನಾಂ ದ್ವಿಜಾನಾಮ್ ।**
**ಯಾಮುಷ್ಕನ್ನಾಸ್ಸರಸಕುಹಳೀಪತ್ರಪಾತ್ರೈರ್ನಿಶಾನ್ತೇ**
**ಮನ್ದಸ್ಮೇರಾಂ ಮಧುಪರಿಮಳೈರ್ವಾಸಯನ್ತೀವ ಪೂಗಾಃ ॥**

ಇವುಗಳಲ್ಲಿ ಮೊದಲನೆಯದರಲ್ಲಿ ಪ್ರಿಯನಲ್ಲಿ ಅನುರಕ್ತಳಾದ ನಾಯಿಕೆಯೊಬ್ಬಳು ಆಗತಾನೆ ಸ್ನಾನಮಾಡಿಕೊಂಡು ತನ್ನ ಪ್ರಿಯಸ್ವಾಮಿಯಲ್ಲಿಗೆ ತನ್ನ ಭಕ್ತಿಯ ಕಾಣಿಕೆಯಾದ ಫಲಪುಷ್ಪಗಳೊಡನೆ ಹೋಗುತ್ತಿರಲು ಆಕೆಯ ಭಕ್ತಿಗೆ ಮೆಚ್ಚಿದ ಸ್ವಾಮಿಯು ದಾರಿಯಲ್ಲಿಯೇ ಅವಳನ್ನು ಇದಿರುಗೊಂಡು ತನ್ನ ಕಟಾಕ್ಷವನ್ನು ಬೀರಿದ ಭಾವವೂ ಎರಡನೆಯದರಲ್ಲಿ ಹಿರಿಯರ ಆಶೀರ್ವಾದವನ್ನು ಪಡೆದು ತಂದೆಯ ಮನೆಯಿಂದ ಆಪ್ತ ಬಂಧುಗಳೊಡನೆ ಪ್ರಸನ್ನಮುಖಿಯಾಗಿ ಗಂಡನ ಮನೆಗೆ ಹೋಗುತ್ತಿರುವ ಸಾಧ್ವಿಯ ವೃತ್ತಾಂತವೂ ಧ್ವನಿತವಾಗಿದೆ.

ಶೇಷಾದ್ರಿಯಿಂದ ಮುಂದೆ ಹೋಗಲು ಕವಿಯ ಜನ್ಮಸ್ಥಳವಾದ ಕಾಂಚೀಪುರವು ಸಿಕ್ಕುವುದು. ಇದನ್ನು ವರ್ಣಿಸದೇ ಹೋಗಲು ಕವಿಗೆ ಇಷ್ಟವಿಲ್ಲ; ಕಾಳಿದಾಸನೂ ಮೇಘಸಂದೇಶದಲ್ಲಿ ಉಜ್ಜಯಿನಿಯನ್ನು ಹನ್ನೆರಡು ಶ್ಲೋಕಗಳಲ್ಲಿ ವರ್ಣಿಸಿದ್ದಾನೆ. ಹಂಸಸಂದೇಶಕಾರರು ಕಂಚಿ

ಯನ್ನೂ ಅದರ ಅಧಿಪತಿಯಾದ ವರದರಾಜಸ್ವಾಮಿಯನ್ನೂ ಹನ್ನೊಂದು ಶ್ಲೋಕದಲ್ಲಿ ವರ್ಣಿಸಿದ್ದಾರೆ. ಅದರ ಮಾದರಿಗಾಗಿ ಮುಂದಿನ ಎರಡು ಶ್ಲೋಕಗಳನ್ನು ನೋಡಬಹುದು.

> **ನಾನಾರತ್ನೈರುಪಚಿತಗುಣಾಂ ನಿತ್ಯಸಂಗೀತನಾದಾಂ**
> **ಭೂಮೇರ್ದ್ರಕ್ಷಸ್ಯುಚಿತವಿಭವಂ ಭೂಷಣಂ ತತ್ರ ಕಾಞ್ಚೀಮ್ ।**
> **ಯಸ್ಯಾಂ ನಿತ್ಯಂ ನಿಹಿತನಯನೋ ಹಸ್ತಿಶೈಲಾಧಿವಾಸೀ**
> **ದ್ವಂದ್ವಾತೀತಸ್ಸ ಖಲು ಪುರುಷೋ ದೃಶ್ಯತೇ ಸತ್ಯಕಾಮಃ ॥**

> **ಸಂಚಿನ್ವಾನಾ ತರುಣತುಲಸೀದಾಮಭಿಸ್ಸ್ವಮಭಿಖ್ಯಾಂ**
> **ತಸ್ಯಾಂ ವೇದ್ಯಾಮನುವಿದಧತೀ ಶ್ಯಾಮಲಂ ಹವ್ಯವಾಹಮ್ ।**
> **ಭೋಗೈಶ್ವರ್ಯಪ್ರಿಯಸಹಚರೈಃ ಕಾಽಪಿ ಲಕ್ಷ್ಮೀಕಟಾಕ್ಷೈಃ**
> **ಭೂಯಃಶ್ಯಾಮಾ ಭುವನಜನನೀ ದೇವತಾ ಸನ್ನಿಧತ್ತೇ ॥**

ಹಂಸಸಂದೇಶದಲ್ಲಿ ಬರುವ ಶ್ರೀರಂಗದ ವರ್ಣನೆಯಲ್ಲಿ ಕವಿಯ ಚಾತುರ್ಯವು ತೋರ್ಪಡುವುದು. ರಾಜಹಂಸದ ಮಾರ್ಗದಲ್ಲಿ ಶ್ರೀರಂಗವು ಸಿಕ್ಕುವದು; ಇದು ಪವಿತ್ರವಾದ ಯಾತ್ರಾಸ್ಥಳವಾದುದರಿಂದ ಇದನ್ನೂ ಇದರ ಅಧಿಪತಿಯಾದ ಶ್ರೀರಂಗನಾಥನನ್ನೂ ವರ್ಣಿಸುವುದು ಕವಿಗೆ ಸ್ವಾಭಾವಿಕವೇ ಆಗಿದೆ. ಆದರೆ 'ಲಬ್ಧ್ವಾ ಕುಲಧನಂ ರಾಜಾ ಲಂಕಾಪ್ರಾಯಾ ದ್ವಿಭೀಷಣಃ' ಎಂಬ ವಾಕ್ಯದ ಪ್ರಕಾರ ಶ್ರೀರಾಮಪಟ್ಟಾಭಿಷೇಕವಾದ ಮೇಲೆ ವಿಭೀಷಣನು ಶ್ರೀರಾಮಚಂದ್ರನಿಂದ ಕುಲಧನವಾದ ರಂಗನಾಥ ಸ್ವಾಮಿಯನ್ನು ತೆಗೆದುಕೊಂಡುಬಂದು ಶ್ರೀರಂಗದಲ್ಲಿ ಪುನಃ ಪ್ರತಿಷ್ಠೆ ಮಾಡಿದನೆಂದು ಪುರಾಣಗಳಲ್ಲಿ ಉಕ್ತವಾಗಿದೆ. ಆದುದರಿಂದ ಕವಿಯು ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ರಂಗನಾಥನನ್ನು ವರ್ಣಿಸದೆ ಅವರ ಕ್ಷೇಪಪೀಠವನ್ನು ಮಾತ್ರ ವರ್ಣಿಸಿ ಬಹು ಚಾತುರ್ಯದಿಂದ ಮುಂದೆ ಸಾಗಿದ್ದಾನೆ.

ಮುಂದೆ ರಾಜಹಂಸವು ಚೋಳಪಾಂಡ್ಯರಾಜ್ಯಗಳನ್ನು ದಾಟಿ ಲಂ ಕೆಯನ್ನು ಸೇರಿ ಶಿಂಶುಪಾವೃಕ್ಷದ ಕೆಳಗೆ ಸೀತೆಯನ್ನು ಕಾಣುವನು. ಆಗ

ಅವಳಿರಬಹುದಾದ ಸ್ಥಿತಿಯನ್ನು ವರ್ಣಿಸುವ ಮುಂದಿನ ಶ್ಲೋಕಗಳು ಕವಿಗೆ ವ್ಯಕ್ತಿಚಿತ್ರದಲ್ಲಿರುವ ನೈಪುಣ್ಯವನ್ನು ತೋರಿಸುವ ಉತ್ತಮ ನಿದರ್ಶನಗಳು.

> ಶುದ್ಧಾಮಿನ್ದೋಃ ಶ್ವಪಚಭವನೇ ಕೌಮುದೀಂ ವಿಸ್ಫುರನ್ತೀಂ
> ಆನೀತಾಂ ವಾ ವಿಷತರುವನೇ ಪಾರಿಜಾತಸ್ಯ ಶಾಖಾಮ್ ।
> ಸೂಕ್ತಿಂ ರಮ್ಯಾಂ ಖಲಪರಿಸರೇ ಸತ್ಕವೇಃ ಕೀರ್ತ್ಯಮಾನಾಂ
> ಮನ್ಯೇ ದೀನಾಂ ನಿಶಿಚರಗೃಹೇ ಮೈಥಿಲಸ್ಯಾತ್ಮಜಾತಾಮ್ ।

> ಅಙ್ಗೈರ್ಮ್ಲಾನೈರ್ಯುತ್‌ಕಿಸಲಯಸಮೈರುಜ್ಝಿತಾಕಲ್ಪಪುಷ್ಪೈಃ
> ಗಾಢಾಶ್ಲಿಷ್ಟಾಂ ವಪುಷಿ ವಿಮಲೇ ಬಿಮ್ಬಿತಾಭಿರ್ಲತಾಭಿಃ ।
> ಸಂತಾಪೋಷ್ಣಶ್ವಸನಪರುಷಚ್ಛಾಯಯಾ ಕಿಞ್ಚಿದೂನಾಂ
> ಬನ್ದೀಭೂತಾಂ ನಿಶಿಚರಗೃಹೇ ನನ್ದನಸ್ಯೇವ ಲಕ್ಷ್ಮೀಮ್ ॥

ಹಂಸಸಂದೇಶದ ಕವಿಯು ಪರಮವೇದಾಂತಿ; ಕಾವ್ಯದಲ್ಲಿಯೂ ಅವರ ವೇದಾಂತಜ್ಞಾನದ ಕೈವಾಡವು ಇರುವಹಾಗೆ ಕಾಣುತ್ತದೆ. ಆಧ್ಯಾತ್ಮ ಪ್ರಪಂಚದಲ್ಲಿ ಬೆಳ್ಳಗಿರುವ ಎರಡು ರಕ್ಕೆಗಳಿಂದ ಕೂಡಿದ ಹಂಸವು ಶುದ್ಧ ಸತ್ವಗುಣಗಳನ್ನುಳ್ಳವನೂ ಕರ್ಮಜ್ಞಾನ ಪರಿಪೂರ್ಣನೂ ಆದ ಆಚಾರ್ಯನನ್ನು ಸೂಚಿಸುತ್ತದೆ. ಬಂಧಿತಳಾದ ಸೀತೆಯು ಸಂಸಾರದಲ್ಲಿ ಸಿಕ್ಕಿ ನರಳುತ್ತಿರುವ ಜೀವವನ್ನು ಹೋಲುತ್ತಾಳೆ. ಆ ಬಂಧನದಲ್ಲಿರುವ ಜೀವವನ್ನು ಪರಮಾತ್ಮನು ಈ ಆಚಾರ್ಯನಮೂಲಕ ತನ್ನ ಕೃಪಾಕಟಾಕ್ಷದಿಂದ ತಾನೇ ತನ್ನಲ್ಲಿಗೆ ಬರಮಾಡಿಕೊಂಡು ಮೋಕ್ಷವನ್ನು ಕೊಡುತ್ತಾನೆ. ವಿಶಿಷ್ಟಾದ್ವೈತದ ಈ ಪ್ರಧಾನ ತತ್ವವೇ ರಾಮನು ಕಳುಹಿಸುವ ಸಂದೇಶದಲ್ಲಿ ಸೂಚಿತವಾಗುವಂತಿದೆ. ಆದರೆ ಇದು ಮೂಲತಃ ಕಾವ್ಯವಾದರಿಂದ ಆಧ್ಯಾತ್ಮಿಕದೃಷ್ಟಿಯು ಅಷ್ಟು ಪ್ರಸಕ್ತವಾದ ವಿಷಯವಲ್ಲ. ಕಾವ್ಯದೃಷ್ಟಿಯಿಂದ ಇದು ಸುಂದರವೂ ಮನೋಹರವೂ ಆದುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

# ' ಸುಭಾಷಿತನೀವೀ '

ಸುಭಾಷಿತನೀವಿಯು[1] ವೇಂಕಟನಾಥರು ರಚಿಸಿರುವ ನೀತಿಗ್ರಂಥ. ಹಿಂದೆಯೇ ತಿಳಿಸಿರುವಂತೆ ಇದನ್ನು ಸರ್ವಜ್ಞಸಿಂಗಪ್ಪನಿಗಾಗಿ ಆಚಾರ್ಯರು ರಚಿಸಿದರೆಂಬುದು ಪ್ರತೀತಿ. ಇದನ್ನೂ 'ತತ್ತ್ವಸಂದೇಶ' 'ರಹಸ್ಯಸಂದೇಶ' 'ತತ್ತ್ವಸಂದೇಶವಿವರಣೆ' 'ರಹಸ್ಯಸಂದೇಶವಿವರಣೆ' ಎಂಬುವುಗಳನ್ನೂ ರಚಿಸಿ ಧಾರ್ಮಿಕ ಮತ್ತು ದಾರ್ಶನಿಕ ಉಪದೇಶಗಳನ್ನೊಳಗೊಂಡ ಮುಂದಿನ ಶ್ಲೋಕದೊಡನೆ ಅವನಿಗೆ ಕಳುಹಿಸಿಕೊಟ್ಟರಂತೆ :

ಸತ್ತ್ವಸ್ಥಾನ್ನಿಭೃತಂ ಪ್ರಸಾದಯ ಸತಾಂ ವೃತ್ತಿಂ ವ್ಯವಸ್ಥಾಪಯ
ತ್ರಸ್ಯ ಬ್ರಹ್ಮವಿದಾಗಸಸ್ತೃಣಮಿವತ್ರೈವರ್ಗಿಕಾನ್ ಭಾವಯ ।
ನಿತ್ಯೇ ಶೇಷಿಣಿ ನಿಕ್ಷಿಪನ್ನಿಜಭರಂ ಸರ್ವಂಸಹೇ ಶ್ರೀಸಖೇ
ಧರ್ಮಂ ಧಾರಯ ಚಾತಕಸ್ಯ ಕುಶಲೀ ಧಾರಾಧರೈಕಾನ್ತಿನಃ ॥

ಈ ಶ್ಲೋಕದಲ್ಲಿರುವ ಉಪದೇಶವು ಎಷ್ಟು ಸರಳವಾಗಿಯೂ ಲೌಕಿಕ ದೃಷ್ಟಿಯಿಂದ ಎಷ್ಟು ಸಮಂಜಸವಾಗಿಯೂ ಇದೆಯೆಂಬುದನ್ನು ನೋಡಬಹುದು.

ಸುಭಾಷಿತನೀವಿಯು ಸರ್ವದಾ ಸರ್ವರಿಂದಲೂ ಅನುಸಂಧಾನ ಮಾಡಲು ಯೋಗ್ಯವಾದ ೧೪೪ ಶ್ಲೋಕಗಳನ್ನೊಳಗೊಂಡ ೧೨ ಪದ್ಧತಿಗಳನ್ನುಳ್ಳದ್ದಾಗಿದೆ. ಒಂದೊಂದು ಪದ್ಧತಿಯಲ್ಲಿಯೂ ೧೨ ಶ್ಲೋಕಗಳಿವೆ. ಮೊದಲನೆಯ ಅನಿಪುಣ, ದೃಪ್ತ, ಖಲ, ದುರ್ವೃತ್ತ, ಅಸೇವ್ಯ ಎಂಬ ಐದು ಪದ್ಧತಿಗಳಲ್ಲಿ ದುಷ್ಟರ ದುರ್ಗುಣಗಳ ನಿರೂಪಣೆಯೂ ಮುಂದಿನ ಮಹಾಪುರುಷ, ಸುಚರಿತ್ರ, ಸಮಾಶ್ರಿತ, ನೀತಿಮತ್, ಧನದಾಸ್ಯ ಎಂಬ ಐದು ಪದ್ಧತಿಗಳಲ್ಲಿ ಸಜ್ಜನರ ಸದ್ಗುಣ ಪ್ರಶಂಸೆಯೂ ಹನ್ನೊಂದನೆಯ

---

[1] ಇದಕ್ಕೆ ಶ್ರೀನಿವಾಸಸೂರಿಯವರು "ರತ್ನಪೇಟಿಕಾ" ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ.

೬ 5

ದರಲ್ಲಿ ಸತ್ಕವಿಗಳ ಸ್ವಭಾವವರ್ಣನವೂ ಹನ್ನೆರಡನೆಯದರಲ್ಲಿ ಪರೀಕ್ಷಕ ಪದ್ಧತಿಯೂ ಕ್ರಮವಾಗಿ ವರ್ಣಿತವಾಗಿವೆ. ಇದು ಭರ್ತೃಹರಿಯ ಶತಕಗಳ ಮಾದರಿಯಲ್ಲಿದ್ದರೂ ಅವಕ್ಕಿಂತಲೂ ಬಹಳ ಉತ್ತಮವಾಗಿದೆ. ಅದರ ಹಾಗೆ ಆಭಾಸಶೃಂಗಾರಗಳ ವರ್ಣನೆಯಿಲ್ಲ. ಮನಸ್ಸಿಗೆ ಜಿಗುಪ್ಸೆಯಾಗದ ಆವಶ್ಯಕವಾದ ನೀತಿಗಳನ್ನು ಮಾತ್ರ ಒಳಗೊಂಡಿದೆ. ಶೈಲಿಯು ಬಹು ಲಲಿತವಾಗಿದೆ. ವಿಶೇಷವಾಗಿ ಅನುಷ್ಟುಪ್ ಶ್ಲೋಕಗಳೇ ಆಗಿರುವುದರಿಂದ ಎಲ್ಲವೂ ಸೂತ್ರಪ್ರಾಯವಾಗಿದೆ. ಅರ್ಥಗ್ರಹಣಕ್ಕಾಗಿ ಸ್ವಲ್ಪವೂ ತೊಂದರೆ ಪಡಬೇಕಾಗಿಲ್ಲ. ಇದರ ಪ್ರಾರಂಭದಲ್ಲಿ ಮಂಗಳಾಚರಣೆಯನ್ನು ಮಾಡುವ ರೀತಿಯು ಬಹಳ ನವೀನವಾಗಿದೆ.

ಪ್ರಥಮಸುಜನಾಯ ಪುಂಸೇ
ಮಹ್ಯಮಪಿ ಪ್ರಥಮದುರ್ಜನಾಯ ನಮಃ ।
ಸರ್ವಂ ಹತಃ ಕೃತಂ ಯೌ
ಸಕೃದುಪಕಾರಾಪಕಾರಾಭ್ಯಾಮ್ ॥

ಶೈಲಿಯ ಲಾಲಿತ್ಯವನ್ನೂ ಅಭಿಪ್ರಾಯದ ಸರಳತೆಯನ್ನೂ ತೋರಿಸುವುದಕ್ಕಾಗಿ ಮುಂದಿನ ಶ್ಲೋಕಗಳನ್ನು ಉದ್ಧರಿಸಿದೆ.

ಮನ್ಯೇ ಕಿನ್ನರಮುಖ್ಯಾನಾಂ ಮೌನಂ ಜಗತಿ ಸಾಮ್ಪ್ರತಮ್ ।
ಮಶಕಕ್ವಣಿತಂ ಯತ್ರ ವೀಣಾಸ್ವನವಿಕಲ್ಪನಮ್ ॥
ಕಲಕಣ್ಠಗಲಾಸ್ವಾದ್ಯೇ ಕಾಮಸ್ಯಾಸ್ತ್ರೇ ನಿಜಾಂಕುರೇ ।
ನಿಂಬವೃತ್ತಿಭಿರುದ್ಗೀರ್ಣೇ ನ ಚೂತಃ ಪರಿತಪ್ಯತೇ ॥

ಮತಿಮನ್ಥಜವೇನ ಲಬ್ಧವರ್ಣ-
ಪ್ರತಿಪನ್ನಾ ವಿಬುಧೈರನನ್ಯಭಕ್ತ್ಯಾಃ ।
ಸುಕವೇರನಘಾ ನ ಯಸ್ಯ ಸೂಕ್ತಿಃ
ಸ್ವದತೇ ದುಗ್ಧಪಯೋನಿಧೇಃ ಸುಧೇವ ॥

# ‘ ಪಾದುಕಾಸಹಸ್ರಂ ’

ಆಚಾರ್ಯರ ‘ ಪಾದುಕಾಸಹಸ್ರ ’ವೂ[1] ಕಾವ್ಯಗೋಷ್ಠಿಗೇ ಸೇರ ತಕ್ಕದು. ಇದು ಒಂದು ರಾತ್ರಿಯಲ್ಲಿ ರಚಿತವಾದುದೆಂಬ ಪ್ರತೀತಿಯಿದೆ. ಇದರಲ್ಲಿ ಶ್ರೀರಂಗನಾಥದೇವರ ಪಾದುಕೆಯ ವಿಷಯವು ಉಕ್ತವಾಗಿದೆ. ಗ್ರಂಥವು ಮೂವತ್ತೆರಡು ಪದ್ಧತಿ ಅಥವಾ ಅಧ್ಯಾಯಗಳಾಗಿ ಭಾಗವಾಗಿದೆ. ಇವರಲ್ಲಿ ಕೆಲವೆಡೆಗಳಲ್ಲಿ ಶಬ್ದಾಲಂಕಾರಕ್ಕೂ ಚಿತ್ರಕವಿತೆಗಳಿಗೂ ವಿಶೇಷ ಪ್ರಾಶಸ್ತ್ಯವಿದ್ದರೂ ಅನೇಕೆಡೆಗಳಲ್ಲಿ ಉತ್ತಮಭಾವನೆಗಳ ಉಲ್ಲೇಖವಿದೆ. ಪಾದುಕೆಯ ಆಕಾರ, ಮಹಿಮೆ, ಅಲಂಕಾರ, ಪುಷ್ಪ, ಸಂಪ್ರದಾಯ ಪ್ರಪಂಚದಲ್ಲಿ ಅದಕ್ಕಿರುವ ಸ್ಥಾನ, ವಿಶಿಷ್ಟಾದ್ವೈತಮತವಿವರಣೆ ಮೊದಲಾದುವು ರಾಮಾಯಣವೇ ಮೊದಲಾದ ವೈಷ್ಣವಪುರಾಣೇತಿಹಾಸಗಳ ಆಧಾರದ ಮೇಲೆ ಬಹು ಹೃದಯಂಗಮವಾಗಿ ವರ್ಣಿತವಾಗಿವೆ. ಪಾದುಕಾಸಹಸ್ರ ವನ್ನು ಓದುವುದರಿಂದಲೇ ಅದರ ಕರ್ತೃವಿನ ವಿಷಯದಲ್ಲಿ ಪೂರ್ಣಭಕ್ತಿಯು ಹುಟ್ಟುವುದು. ಆದರೆ ಇದರ ಕರ್ತೃವಾದ ವೇದಾಂತಾಚಾರ್ಯರು ಇದಕ್ಕೆ ಕರ್ತನು ಸಾಕ್ಷಾತ್ ಪರಮಪುರುಷನಲ್ಲದೆ ತಾವಲ್ಲವೆಂಬುದನ್ನೂ ಆದುದ ರಿಂದ ಅದು ಸಮಸ್ತ ಸಹೃದಯರಿಂದ ವಿಶ್ವಸನೀಯವಾದುದೆಂಬುದನ್ನೂ ಮುಂದಿನ ಶ್ಲೋಕಗಳಲ್ಲಿ ಹೇಳಿದ್ದಾರೆ—

---

[1] ಇದಕ್ಕೆ ಭಾರದ್ವಾಜ ಶ್ರೀನಿವಾಸಾಚಾರ್ಯರು ‘ ಪ್ರಭಾವಳಿ ’ ಎಂಬ ವ್ಯಾಖ್ಯಾನವನ್ನು ರಚಿಸಿರುವರು.

[2] ಪದ್ಧತಿಗಳ ಕ್ರಮವು ಈರೀತಿ ಇದೆ— ಪ್ರಸ್ತಾವನಾ, ಸಮಾಖ್ಯಾ, ಸಮರ್ಪಣ ಪ್ರತಿಷ್ಠಾಪನಾ, ಅಧಿಕಾರ, ಅಭಿಷೇಕ, ನಿರ್ಯಾತನ, ವೈತಾಲಿಕ, ಶೃಂಗಾರ, ಸಂಚಾರ, ಪುಷ್ಪ, ಪರಾಗ, ನಾದ, ರತ್ನ, ಸಾಮಾನ್ಯ, ಬಹುರತ್ನ, ಪದ್ಮರಾಗ, ಮೌಕ್ತಿಕ, ಮರಕತ, ಇಂದ್ರನೀಲ, ಬಿಂಬಪ್ರತಿಬಿಂಬ, ಕಾಂಚನ, ಶೇಷ, ದ್ವಂದ್ವ, ಸನ್ನಿವೇಶ, ಯಂತ್ರಿಕಾ, ರೇಖಾ, ಸುಭಾಷಿತ, ಪ್ರಕೀರ್ಣ, ಚಿತ್ರ, ನಿರ್ವೇದ, ಫಲ.

ನಿಶ್ಶೇಷಮಮ್ಬರತಲಂ ಯದಿ ಪತ್ರಿಕಾ ಸ್ಯಾತ್
ಸಪ್ತಾರ್ಣವೀ ಯದಿ ಸಮೇತ್ಯ ಮಷೀ ಭವಿತ್ರೀ ।
ವಕ್ತಾ ಸಹಸ್ರವದನಃ ಪುರುಷಃ ಸ್ವಯಂಚೇತ್
ಲಿಖ್ಯೇತ ರಂಗಪತಿಪಾದುಕಯೋಃ ಪ್ರಭಾವಃ ॥

ಯದಿ ಸ್ಫೀತಾ ಭಕ್ತಿಃ ಪ್ರಣಯಮುಖವಾಣೀಪರಿಪಣಂ
ಪದತ್ರಾಣಸ್ತೋತ್ರಂ ಹೃದಿ ಬಿಭೃಥ ರಙ್ಗಕ್ಷಿತಿಭೃತಃ ।
ನಿರುನ್ಮಾದೋ ಯದ್ವಾ ನಿರವಧಿಸುಧಾನಿರ್ಝರಮುಚೋ
ವಚೋಭಂಗೀರೇತಾ ನ ಕಥಮನುರುನ್ಧೇ ಸಹೃದಯಃ ॥

ಜಯತಿ ಯತಿರಾಜಸೂಕ್ತಿರ್ಜಯತಿ ಮುಕುಂದಸ್ಯ ಪಾದುಕಾಯುಗಳೀ ।
ತದುಭಯಧನಾಸ್ತ್ರಿವೇದೀಮವನ್ಧ್ಯಯನ್ತೋ ಜಯನ್ತಿ ಭುವಿ ಸನ್ತಃ ॥

## ‘ ಸಙ್ಕಲ್ಪಸೂರ್ಯೋದಯ ’

ವೇಂಕಟನಾಥರ ‘ಸಂಕಲ್ಪಸೂರ್ಯೋದಯ’ವು ಒಂದು ಧಾರ್ಮಿಕ ನಾಟಕ. ಇದು ಕೃಷ್ಣಮಿಶ್ರರ ‘ಪ್ರಬೋಧಚಂದ್ರೋದಯ’ದ ಆಧಾರದಮೇಲೆ ಅದಕ್ಕೆ ಪ್ರತಿಸ್ಪರ್ಧಿಯಾಗಿ ಬರೆದ ನಾಟಕ. ಪ್ರಬೋಧಚನ್ದ್ರೋದಯದ ವಿಷಯವು ಅದ್ವೈತಸಿದ್ಧಾನ್ತಪ್ರತಿಪಾದನೆ. ಅದಕ್ಕೆ ಪ್ರತಿಯಾಗಿ ವಿಶಿಷ್ಟಾದ್ವೈತಸಿದ್ಧಾನ್ತದ ವೈಶಿಷ್ಟ್ಯವನ್ನು ತೋರಿಸುವುದಕ್ಕಾಗಿ ಪ್ರಬೋಧಚನ್ದ್ರೋದಯದ ತಡಿಕೆಯನ್ನೇ ಇಟ್ಟುಕೊಂಡು ಆಚಾರ್ಯರು ಆವಶ್ಯಕವಾದೆಡೆಗಳಲ್ಲೆಲ್ಲಾ ಮಾರ್ಪಾಟುಮಾಡಿಕೊಂಡು ಹಿಗ್ಗಿಸಿ ಕುಗ್ಗಿಸಿ ಮಿರುಗಿಟ್ಟು ಒಂದು ಸುವರ್ಣಪುತ್ಥಳಿಯನ್ನು ನಿರ್ಮಿಸಿದ್ದಾರೆ. ಇವುಗಳ ಸಾಮ್ಯವೈಷಮ್ಯಗಳನ್ನು ಅವುಗಳ ಕಥಾವಸ್ತುನಿರೂಪಣದಿಂದ ತಿಳಿದುಕೊಳ್ಳಬಹುದು.

ಪ್ರಬೋಧಚನ್ದ್ರೋದಯದ ಕಥಾವಸ್ತು ಈರೀತಿ ಇದೆ. “ಈಶ್ವರನಿಗೆ ಅವಿದ್ಯೆಯಲ್ಲಿ ಮನಸ್ಸೆಂಬ ಮಗನು ಹುಟ್ಟಿದನು. ಆವನಿಗೆ ಪ್ರವೃತ್ತಿಯಲ್ಲಿ ಮಹಾಮೋಹಾದಿಗಳೂ ನಿವೃತ್ತಿಯಲ್ಲಿ ವಿವೇಕಾದಿಗಳೂ

ಹುಟ್ಟಿದರು. ಮನಸ್ಸು ಅಹಂಕಾರವನ್ನು ಅನುವರ್ತಿಸಿ ಈಶ್ವರನನ್ನೇ ಬಂಧನದಲ್ಲಿಟ್ಟನು. ಮಹಾಮೋಹಾದಿಗಳು ಈ ಬಂಧನವನ್ನು ಬಿಗಿಪಡಿಸುತ್ತಲೂ ವಿವೇಕಾದಿಗಳಿಗೆ ವಿರುದ್ಧವಾಗಿಯೂ ಇದ್ದರು. ಮಹಾಮೋಹನೂ ಅವನ ಪರಿವಾರದವರುಗಳಾದ ದಂಭಾಹಂಕಾರಾದಿಗಳೂ ಕಾಶಿಯಲ್ಲಿ ಅಧಿಕಾರವಮಾಡುತ್ತಿರುವರು; ಚಾರ್ವಾಕನು ಬಂದು ಕಲಿಪ್ರಭಾವದಿಂದ ಎಲ್ಲರೂ ವೇದಮಾರ್ಗವನ್ನು ಬಿಡುತ್ತಿರುವರೆಂದೂ, ಆದರೆ ತನಗೆ ವಿಷ್ಣುಭಕ್ತಿಯು ಹೆದರಿಕೆಯಿದೆಯೆಂದೂ ಮಹಾಮೋಹನಿಗೆ ವರದಿಯೊಪ್ಪಿಸುವನು. ಕೂಡಲೆ ಮಹಾಮೋಹನು ವಿಷ್ಣುಭಕ್ತಿಯನ್ನು ನಾಶಪಡಿಸಲು ಕಾಮಕ್ರೋಧಗಳನ್ನು ಕಳುಹಿಸುವನು. ಅತ್ತ ವೈರಾಗ್ಯಾದಿಗಳು ಭೇದೋಪಾಯದಿಂದ ಧರ್ಮವನ್ನು ಕಾಮನಿಂದ ಅಗಲಿಸದಂತೆಯೂ ಶಾಂತಿ ಮತ್ತು ಅವಳ ತಾಯಿ ಶ್ರದ್ಧೆ ಸೇರಿ ವಿವೇಕನೊಡನೆ ಉಪನಿಷದ್ದೇವಿಯನ್ನು ಸೇರಿಸಲು ಪ್ರಯತ್ನಿಸುತ್ತಿರುವಂತೆಯೂ ಮದಮಾನಗಳಿಂದ ವರದಿಬರುವುದು. ಆಗ ಕಾಮನು ಧರ್ಮವನ್ನು ಹಿಡಿದು ತರಬೇಕೆಂದೂ ಕ್ರೋಧಲೋಭರು ಶಾಂತಿಯನ್ನು ಜಯಿಸಬೇಕೆಂದೂ ಮಿಥ್ಯಾದೃಷ್ಟಿ ಶ್ರದ್ಧೆಯನ್ನು ಎಳೆದೊಯ್ದು ನಾಸ್ತಿಕರಲ್ಲಿ ಸೇರಿಸಬೇಕೆಂದೂ ಮಹಾಮೋಹನು ಅಪ್ಪಣೆಮಾಡುವನು. ಶಾಂತಿ ತನ್ನ ತಾಯಿಯಾದ (ಸಾತ್ವಿಕ) ಶ್ರದ್ಧೆಯನ್ನು ಹುಡುಕಿಕೊಂಡು ಅಲೆಯುತ್ತಾ ಜೈನ ಬೌದ್ಧ ಸನ್ಯಾಸಿಗಳಲ್ಲಿ ತಾಮಸಶ್ರದ್ಧೆಯನ್ನೂ ಕಾಪಾಲಿಕನಲ್ಲಿ ರಾಜಸಶ್ರದ್ಧೆಯನ್ನೂ ಕಾಣುವಳು. ಇವರೆಲ್ಲರೂ ಮಹಾಮೋಹನ ಕಿಂಕರು. ಅವರ ಸಂಭಾಷಣೆಯಿಂದ ಸಾತ್ವಿಕಶ್ರದ್ಧೆಯೂ ಧರ್ಮನೂ ವಿಷ್ಣುಭಕ್ತಿಯನ್ನು ಸೇರಿ ಸಾಧುಜನರ ಹೃದಯದಲ್ಲಿ ನೆಲಸಿದ್ದಾರೆಂದು ಗೊತ್ತಾಗುವುದು. ಈ ಶ್ರದ್ಧಾಧರ್ಮರನ್ನು ಹಿಡಿದು ತರಲು ಕಾಪಾಲಿಕನು ಮಹಾಭೈರವಿ ವಿದ್ಯೆಯನ್ನು ಕಳುಹಿಸುವನು. ಭೈರವಿಗೆ ಸಿಕ್ಕಿದ್ದ ಧರ್ಮವನ್ನೂ ಶ್ರದ್ಧೆಯನ್ನೂ ವಿಷ್ಣುಭಕ್ತಿ ಬಿಡಿಸಿ ಶ್ರದ್ಧೆಯಲ್ಲಿಗೆ ಕಳುಹಿಸುವಳು. ವಿವೇಕಮಹಾ

ರಾಜನು ವಸ್ತು ವಿಚಾರವನ್ನು ಕಾಮನ ಮೇಲೂ ಕ್ಷಮೆಯನ್ನು ಕ್ರೋಧನಮೇಲೂ ಸಂತೋಷವನ್ನು ಲೋಭನಮೇಲೂ ಕಳುಹಿಸಿ ತಾನು ಯುದ್ಧಕ್ಕೆ ಹೊರಟು ಕಾಶಿಯಲ್ಲಿದ್ದ ಆದಿಕೇಶವದೇವಾಲಯದಲ್ಲಿ ಬೀಡು ಬಿಡುವನು. ಚಕ್ರತೀರ್ಥದಲ್ಲಿ ವಿಷ್ಣುಭಕ್ತಿ ಶಾಂತಿಯರಿಗೆ ಶ್ರದ್ಧೆ ಯುದ್ಧ ವಿವರಗಳನ್ನು ತಿಳಿಸುವಳು. ವಿವೇಕನು ಜಯಹೊಂದಿ ಮಹಾಮೋಹನು ಎಲ್ಲಿಯೋ ಅಡಗಿಕೊಂಡಿರುವನು. ಮಾನಸನು ತನ್ನ ನಂಟರಿಷ್ಟರು ಸತ್ತ ಶೋಕದಿಂದ ಆತ್ಮಹತ್ಯಮಾಡಿಕೊಳ್ಳಬೇಕೆಂದಿರುವಾಗ ವೈಯಾಸಿಕಿ ಸರಸ್ವತಿ ಅವನನ್ನು ಸಮಾಧಾನಮಾಡುವಳು. ಆಗತಾನೆ ಬಂದ ವೈರಾಗ್ಯನನ್ನೂ ವಿಷ್ಣುಭಕ್ತಿ ಕಳುಹಿಸಿದ ಮೈತ್ರಿ ಮೊದಲಾದವರನ್ನೂ ಜತೆಮಾಡಿಕೊಂಡು ಮಾನಸನು ಉಪಶಾಂತನಾಗುವನು. ಶಾಂತಿ ಉಪನಿಷದ್ದೇವಿಯನ್ನೂ ಶ್ರದ್ಧೆ ವಿವೇಕನನ್ನೂ ಕರೆತಂದು ಸೇವಿಸುವರು. ಉಪನಿಷತ್ತು ತಾನು ಮತಚತ್ವರಾದಿಗಳಲ್ಲಿ ಪಟ್ಟ ಕಷ್ಟಗಳನ್ನೂ ಕೊನೆಗೆ ಗೀತೆಯೊಡನೆ ಸೇರಿದ್ದನ್ನೂ ವಿವರಿಸಿ ಪುರುಷನೇ ಪರಮೇಶ್ವರನೆಂದು ತಿಳಿಸುವಳು. ಪುರುಷನು ಧ್ಯಾನಮಾಡುತ್ತಿರಲು ಪ್ರಬೋಧನು ಹುಟ್ಟಿ ಬಂದು ಅವನನ್ನು ಆಲಂಗಿಸುವನು. ಬಂಧನವು ನೀಗುವುದು. ವಿಷ್ಣುಭಕ್ತಿ ಬಂದು ಸಂತೋಷಿಸಿ ಆಶೀರ್ವದಿಸುವಳು."*

ಹಾಗೆಯೇ ಸಙ್ಕಲ್ಪಸೂರ್ಯೋದಯದ ಕಥಾವಸ್ತುವನ್ನು ಗಮನಿಸೋಣ. ಮಹದಾದಿವಿಕಾರಗಳನ್ನುಂಟುಮಾಡುವ ಪ್ರಕೃತಿಯು ಕುಲಪತಿಯಾದ ಪುರುಷನನ್ನು ಗರ್ಭಜನ್ಮಜರಾಮರಣಾದಿ ಚಕ್ರಯಂತ್ರದಲ್ಲಿ ಸಿಲುಕಿಸಿ ಬಂಧನದಲ್ಲಿಡುವಳು. ಕುಲಪತಿಯ ವಂಶದಲ್ಲಿಯೇ ಹುಟ್ಟಿದವರು ವಿವೇಕಾದಿಗಳು ಮತ್ತು ಮಹಾ ಮೋಹಾದಿಗಳು. ಇವರಲ್ಲಿ ಮಹಾಮೋಹನು ತನ್ನ ಮಂತ್ರಿ ವರ್ಗದವರಾದ ಕ್ರೋಧ, ಲೋಭ, ದಂಭ, ದರ್ಪ, ತನ್ನ ಪತ್ನಿಯಾದ ದುರ್ಮತಿ, ತನ್ನ ಇತರ ಪರಿವಾರದವರಾದ ರಾಗ, ದ್ವೇಷ, ಜಿಘಾಂಸೆ, ತೃಷ್ಣೆ ಕುಹನೆ, ಈರ್ಷ್ಯೆ ಅಸೂಯೆ ಮೊದ

* ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರ 'ಸಂಸ್ಕೃತನಾಟಕ'ವನ್ನು ನೋಡಿ.

ಲಾದವರ ಸಹಾಯದಿಂದ ಪುರುಷನ ಬಂಧನವನ್ನು ಬಲಪಡಿಸಿ ವಿವೇಕಾದಿಗಳನ್ನು ಜಯಿಸಲು ಪ್ರಯತ್ನಪಡುತ್ತಿರುವರು. ಕಥಾನಾಯಕನಾದ ವಿವೇಕನು ತನ್ನ ಪರಿವಾರದವರಾದ ಸುಮತಿ, ಶ್ರದ್ಧೆ, ವಿಚಾರಣೆ, ವ್ಯವಸಾಯ, ವಾದ, ತರ್ಕ, ಸಂಸ್ಕಾರ, ಪುಷ್ಟಿ, ವಿರಕ್ತಿ, ಕ್ಷಾಂತಿ ಮೊದಲಾದವರ ಸಹಾಯದಿಂದ ಪುರುಷನ ಬಂಧನವನ್ನು ತಪ್ಪಿಸಲು ಪ್ರಯತ್ನಪಟ್ಟು ಆ ಕೆಲಸದಲ್ಲಿ ಕೃತಕೃತ್ಯನಾಗಲು ಮಾಡಬೇಕಾದ ಮಾರ್ಗವನ್ನು ತನ್ನ ಪತ್ನಿಯಾದ ಸುಮತಿಗೆ ತಿಳಿಯಪಡಿಸಿ ತನ್ನ ಸೇನಾಪತಿಯಾದ ವ್ಯವಸಾಯನೊಡನೆ ಕಾರ್ಯನಿರ್ವಾಹಕ್ರಮವನ್ನು ಚಿಂತಿಸುತ್ತಿರುವಾಗ ವಿವೇಕನ ಗುರುವಾದ ವೇದಾನ್ತಸಿದ್ಧಾನ್ತರೂ ಅವರ ಶಿಷ್ಯರಾದ ವಾದನೂ ಪ್ರವೇಶಿಸಿ ನ್ಯಾಯ, ವೈಶೇಷಿಕ, ನಿರೀಶ್ವರಮೀಮಾಂಸಾದಿ ಸಮಸ್ತ ಮತಗಳೂ ಪುರುಷನ ಬಂಧನವನ್ನು ಬಿಡಿಸುವುದಕ್ಕೆ ಅಸಾಧ್ಯವಾದುವೆಂದೂ ಖ್ಯಾತಿಲಾಭಪೂಜೇಚ್ಛೆಯಿಲ್ಲದ ವೇದಾನ್ತಶಾಸ್ತ್ರಾಭ್ಯಾಸವೇ ಸರಿಯಾದ ಮಾರ್ಗವೆಂದೂ ತಿಳಿಸುವರು. ಈ ಮಧ್ಯೆ ಮಹಾಮೋಹನಿಂದ ಪ್ರೇರಿತರಾದ ಕಾಮ ಕ್ರೋಧ ದರ್ಪ ದಂಭ, ಈರ್ಷ್ಯೆ ಮೊದಲಾದವರು ವಿವೇಕನನ್ನು ಜಯಿಸಲು ಸರ್ವವಿಧದಲ್ಲಿಯೂ ಪ್ರಯತ್ನಿಸಿ ತಮ್ಮ ಪ್ರಭಾವವನ್ನು ಎಲ್ಲೆಡೆಗೂ ಹರಡುವರು. ಇದನ್ನು ನೋಡಿ ನಾಯಕನಾದ ವಿವೇಕನು ಇವರನ್ನು ಗೆಲ್ಲಲು ಪುರುಷನಿಗೆ ಒಂದು ಸಮಾಧಿಸ್ಥಾನವನ್ನು ಹುಡುಕಲು ತನ್ನ ಸಾರಥಿಯಾದ ತರ್ಕನೊಡನೆ ಹೊರಟು ಭರತಖಂಡವನ್ನು ಆಮೂಲಾಗ್ರವಾಗಿ ಸುತ್ತಿ ಕೊನೆಗೆ ಯಾವ ಸರಿಯಾದ ಸ್ಥಳವೂ ಸಿಕ್ಕದಿರಲು ಬಾಹ್ಯಸನ್ನಿವೇಶಗಳು ಅಷ್ಟು ಪ್ರಧಾನವಲ್ಲವೆಂದೂ ಸಮಾಧಿಗೆ ತನ್ನ ಹೃದಯವೇ ಉತ್ತಮಸ್ಥಳವೆಂದೂ ನಿಷ್ಕರ್ಷಿಸಿ ತನ್ನ ಅಧೀನದಲ್ಲಿರುವ ಪುರುಷನಿಗೆ ಮೋಕ್ಷಸಾಧನೆಗಾಗಿಯೂ ಶತ್ರುಗಳನ್ನು ಜಯಿಸುವುದಕ್ಕಾಗಿಯೂ ಪುರುಷನ ಪರಮ ಚಂಚಲವಾದ ಮನಸ್ಸನ್ನು ಏಕಮಾತ್ರವಾದ ಆರಾಧ್ಯದೈವದಲ್ಲಿ ಕೇಂದ್ರೀಕರಿಸಲು ಪ್ರಯತ್ನಪಡು

ತ್ತಾನೆ. ನಾಯಕ ಮತ್ತು ಪ್ರತಿನಾಯಕರ ಪಕ್ಷಕ್ಕೆ ಯುದ್ಧವಾಗಿ ವಿವೇಕ ವಿಜಯವಾಗುವುದು. ಈಗ ಪುರುಷನು ಯಾವ ಪ್ರತಿಭಟನೆಯೂ ಇಲ್ಲದೆ ಸಮಾಧಿಸ್ಥನಾಗಿ ವಿಷ್ಣುಭಕ್ತಿಯ ಸಹಾಯದಿಂದ ಭಗವಂತನಲ್ಲಿ ಶರಣಾಗತನಾಗುವನು. ಫಲಸಂಗರಹಿತವಾದ ಕರ್ಮಾನುಷ್ಠಾನದಲ್ಲಿದ್ದುಕೊಂಡು ಉಪಾಯಮಾರ್ಗದಿಂದಲೂ ಅಪಾಯಮಾರ್ಗದಿಂದಲೂ ನಿವೃತ್ತನಾಗಿರುವ ಪುರುಷನನ್ನು ಭಗವತ್ಕಟಾಕ್ಷವನ್ನು ಶಿರಸಾವಹಿಸಿರುವ ವಿಷ್ಣುಭಕ್ತಿಯು ಸಮಸ್ತದೋಷಪರಿಹಾರಪೂರ್ವಕವಾಗಿ ಬಂಧನದಿಂದ ಬಿಡಿಸುವಳು. ಆಗ ಭಗವಂತನ 'ಅನುಗ್ರಹಸಂಕಲ್ಪಸೂರ್ಯೋದಯ'ವಾಗಿ ಪುರುಷನು ಮುಕ್ತನಾಗಿ ಪರಮಪದದಲ್ಲಿ ಭಗವಂತನ ನಿತ್ಯಕೈಂಕರ್ಯದಲ್ಲಿ ಭಾಗಿಯಾಗುವನು.

ಈ ಎರಡು ಕಥಾವಸ್ತುಗಳ ತೋಲನದಿಂದ ಇವರಲ್ಲಿ ಅನೇಕ ಭಾಗವು ಎರಡು ನಾಟಕಗಳಿಗೆ ಸಮಾನವಾಗಿರುವೆಂಬಂಶವು ವಿಶದವಾಗುವುವು. ಎರಡರಲ್ಲಿಯೂ ನಾಟಕದ ನಾಯಕಪ್ರತಿನಾಯಕರೂ ಇತರ ಪಾತ್ರಗಳೂ ಹೆಚ್ಚುಕಡಿಮೆ ಒಂದೇರೀತಿಯಲ್ಲಿರುತ್ತವೆ. ಕಥಾಪರಿಕಲ್ಪನೆಯೂ ಒಂದೇವಿಧ. ಎರಡರಲ್ಲಿಯೂ ಪ್ರಧಾನವಾದ ರಸ ಶಾಂತರಸ; ಎರಡರಲ್ಲಿಯೂ ಮೋಕ್ಷಕ್ಕೆ ವಿಷ್ಣುಭಕ್ತಿಯೇ ಸಹಾಯಕ. ಅದಕ್ಕೇ ಪ್ರಾಧಾನ್ಯ. ಅದು ಮೊದಲಿಂದ ಕೊನೆಯವರೆಗೆ ಅನುಸ್ಯೂತವಾಗಿ ಬರುತ್ತವೆ. ಇಷ್ಟಪ್ರಾಪ್ತಿಗೂ ಬಂದ ಕಷ್ಟಗಳೂ ನಿವಾರಣೆಯಾಗುವುದು ಅದರ ಪ್ರಭಾವದಿಂದಲೇ; ಆದರೂ ಮೂಲತತ್ತ್ವಗಳಲ್ಲಿಯೂ ಮೋಕ್ಷಪ್ರಾಪ್ತಿಯ ಮಾರ್ಗದಲ್ಲಿಯೂ ಮೋಕ್ಷಸ್ವರೂಪ ಮತ್ತು ಅದರ ವಿವರಣೆಗಳಲ್ಲಿಯೂ ಬಹಳ ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳು ಸಂಕಲ್ಪಸೂರ್ಯೋದಯದಲ್ಲಿ ಹೇಗೆ ಚಿತ್ರಿತವಾಗಿವೆ ಎಂಬುದನ್ನು ಮುಂದೆ ನೋಡಬಹುದು.

ಪ್ರಬೋಧಚಂದ್ರೋದಯದ ಪ್ರಕಾರ ಮಾಯೆ ಎಂಬ ಅವಿದ್ಯಾವಿಶಿಷ್ಟನೂ, ಆ ಅವಿದ್ಯೆಗೆ ಗೋಚರನೂ ಆಶ್ರಯನೂ ಆಗಿರುವ ಶುದ್ಧ

ಚೈತನ್ಯವೇ ಈಶ್ವರನು. ಈ ಈಶ್ವರನು ಅವಿದ್ಯೆಯಲ್ಲಿ ಪ್ರತಿಬಿಂಬಿತನಾಗಿ ಪ್ರವೃತ್ತಿಮಾರ್ಗದಲ್ಲಿ ಹೊರಟು ದುಃಖಭರಿತವಾದ ಈ ಸಂಸಾರವನ್ನು ಸುಖವೆಂಬ ಭ್ರಾಂತಿಯಿಂದ ಆಶ್ರಯಿಸಿ ಕಾಮಕ್ರೋಧಾದಿ ಬಂಧಗಳಿಂದ ಬಂಧಿಸಲ್ಪಡುವನು. ಈ ಬಂಧನವು ನಿವೃತ್ತಿಯಾಗಬೇಕಾದರೆ ಮೂಲ ಕಾರಣವಾದ ಅಜ್ಞಾನ ನಿವೃತ್ತಿಯಾಗಬೇಕು. ಅದು ಭ್ರಾಂತಿ ಎಂಬ ಅವಿದ್ಯಾರೂಪವಾದುದರಿಂದ ವಿದ್ಯೆ ಎಂಬ ಪರಿಶುದ್ಧಜ್ಞಾನವು ಆವಶ್ಯಕ. ಆ ವಿದ್ಯೆಯು ವಿಷ್ಣುಭಕ್ತಿಯ ರೂಪದಲ್ಲಿ ಪ್ರತ್ಯಕ್ಷವಾಗಲು ಪ್ರಬೋಧೋದಯದ ಮೂಲಕ ನಿರ್ವಿಶೇಷಪರಬ್ರಹ್ಮ ಸಾಕ್ಷಾತ್ಕಾರವೂ ಜೀವಬ್ರಹ್ಮೈಕ ಸಾಕ್ಷಾತ್ಕಾರವೂ ಆಗಿ ಮೋಕ್ಷಪ್ರಾಪ್ತಿಯಾಗುವುದು.

ಸಂಕಲ್ಪಸೂರ್ಯೋದಯದ ಮಾರ್ಗವೇ ಬೇರೆ. ಅದರ ಪ್ರಕಾರ ನಾರಾಯಣನೆಂಬ ಶಿಲ್ಪಿಯುಪ್ರಕೃತಿಯೆಂಬ ಚಿತ್ರದ ಕಡ್ಡಿಯಿಂದ ಸತ್ತ್ವರಜಸ್ತಮೋಗುಣಗಳೆಂಬ ಬಣ್ಣಗಳನ್ನು ಚೆನ್ನಾಗಿ ಕಾಣುವಂತೆ ಬಳಿದು ಒಂದಕ್ಕೊಂದು ಸೇರದಂತೆ ಬೇರೆಬೇರೆಯಾಗಿ ಆಯಾಕರ್ಮಗಳಿಗೆ ತಕ್ಕಂತೆ ವಿಭಾಗಿಸಿ ಇರಿಸಲ್ಪಟ್ಟಿರುವ ಸ್ಥಾವರಜಂಗಮಾತ್ಮಕವಾದ ಶರೀರಗಳೆಂಬ ಚಿತ್ರಗಳನ್ನು ಕಲ್ಪಿಸಿರುವನು. ರತ್ನದ ಗೋಡೆಯಂತೆ ಜ್ಞಾನರೂಪನಾದ ಕಾರಣ ದೇವಾದಿ ದೇಹಭೇದಗಳಿದ್ದಾಗ್ಯೂ ತಾನು ಭಿನ್ನನಾಗದೆ ಇರುವ ಜೀವಾತ್ಮನು ಈ ದೇಹವೆಂಬ ಚಿತ್ರವನ್ನು ಧರಿಸುವನು. ಆತನ ಪತ್ನಿಯಾದ ಬುದ್ಧಿಯು ಸ್ವಯಂಪ್ರಕಾಶಳಾದಾಗ್ಯೂ ಸೂರ್ಯನು ಕಾಣದೇ ಹೋದಾಗ ಕಮಲಿನಿಯು ಸಂಕೋಚವಾಗುವಂತೆ ತನ್ನ ಪತಿಯು ಪ್ರಕೃತಿಸಂಬಂಧವನ್ನು ಪಡೆದು ತನಗೆ ದೂರವಾಗಿ, (ಸ್ಥಾವರವನ್ನು ಹೊಂದಿದಾಗ ಪತಿವ್ರತೆಯಂತೆ ಸಂಕುಚಿತಳಾಗಿ ಕಳೆಗುಂದಿದ ಅವನಂತೆ ತಾನೂ ಅಶಕ್ತಳಾಗಿ ಅವನನ್ನು ಉದ್ಧರಿಸಲು ಅಸಮರ್ಥಳಾಗುತ್ತಾಳೆ. ಈ ಜೀವಾತ್ಮನು ಅನೇಕ ಜನ್ಮಗಳಲ್ಲಿ ದುರಿತಗಳನ್ನು ಮಾಡಿರುವನು. ಆ ದುರಿತಗಳೆಲ್ಲವೂ ನಿವಾರಣೆಮಾಡುವುದಕ್ಕಾಗದಷ್ಟು ದೃಢವಾಗಿ ಅವಿಚ್ಛಿನ್ನ

ವಾಗಿ ಇವನನ್ನು ಮೋಹಗೊಳಿಸಿ ಸಂಸಾರದಲ್ಲಿ ಸಿಲುಕಿಸುವುವು. ಇವರ ನಿವಾರಣೆಗೆ ನಾರಾಯಣನ ಸ್ವತಂತ್ರವಾದ ಇಚ್ಛಾಶಕ್ತಿಯೇ ಸಮರ್ಥ ವಾಗುವುದು. ಈ ಇಚ್ಛಾಶಕ್ತಿಯು ಸ್ವಭಾವವಾಗಿಯೇ ಕರುಣೆಯಿಂದ ಕೂಡಿರುವುದರಿಂದ ಆಚಾರ್ಯಕಟಾಕ್ಷವೆಂಬ ನೆಪದಲ್ಲಿ ಕಾಮದ್ವೇಷಾದಿ ಗಳೆಲ್ಲವನ್ನೂ ನಾಶಮಾಡಿ ಜೀವಾತ್ಮನಿಗೆ ಸಂಸಾರನಿವಾರಣವನ್ನುಂಟು ಮಾಡಿ ಸಂತೋಷಿಸುವುದು.

ಎರಡು ತತ್ತ್ವಗಳಿಗೆ ಇರುವ ಈ ವ್ಯತ್ಯಾಸಗಳನ್ನು ಆಚಾರ್ಯರು ಮನಸ್ಸಿನಲ್ಲಿಟ್ಟುಕೊಂಡು ತಮ್ಮ ನಾಟಕದಲ್ಲಿ ಬಹು ಸೂಕ್ಷ್ಮದೃಷ್ಟಿಯಿಂದ ಅನೇಕ ಮಾರ್ಪಾಟುಗಳನ್ನು ಮಾಡಿದ್ದಾರೆ. ಅವರು ಪ್ರಬೋಧಚಂದ್ರೋ ದಯವನ್ನು ಅನೇಕಸಲ ಮನನಮಾಡಿರುವರು. ಅದರಲ್ಲಿ ಅವರಿಗೆ ಗೌರವ ಬುದ್ಧಿಯೂ ಇದೆ. ಅದರ ಅಭಿಪ್ರಾಯಗಳನ್ನೂ ಭಾಷೆಯನ್ನೂ ಸರಿ ಯೆಂದು ತೋರಿದೆಡೆಗಳಲ್ಲಿ ಕೆಲವು ವ್ಯತ್ಯಾಸಮಾಡಿಕೊಂಡು ಉಪಯೋ ಗಿಸಿಕೊಂಡೂ ಇದ್ದಾರೆ. ಉಳಿದೆಡೆಗಳಲ್ಲಿ ಬಹು ಕುಶಲನಾದ ಶಿಲ್ಪಿಯಂತೆ ಸ್ವಲ್ಪ ಕುಂದಿಗೂ ಅವಕಾಶವಿಲ್ಲದಂತೆ ಮಾರ್ಪಡಿಸಿದ್ದಾರೆ.

ಈ ನಾಟಕಕ್ಕೆ ನಾಮಕರಣಮಾಡುವಾಗ ಆಚಾರ್ಯರಿಗೆ ಬಾದ ರಾಯಣರ 'ತದೋಕೋಜ್ವಲನಂ ತತ್ಪ್ರಕಾಶಿತದ್ವಾರಾ' ಎಂದು ಪ್ರಾರಂಭ ವಾಗುವ ಬ್ರಹ್ಮಸೂತ್ರದ ಜ್ಞಾಪಕವಿದ್ದಿರಬೇಕು. ಇದರಪ್ರಕಾರ ಆತ್ಮನು ಮೋಕ್ಷವನ್ನು ಹೊಂದುವುದಕ್ಕೆ ಪೂರ್ವಭಾವಿಯಾಗಿ ಆ ಆತ್ಮದ ವಿಷಯದಲ್ಲಿ ಭಗವಂತನಿಗೆ ಅನುಗ್ರಹವುಂಟಾಗುವುದು. ಅದರ ಫಲವಾಗಿ ಆತ್ಮನಿಗೆ ದಿವ್ಯದೃಷ್ಟಿಯುಂಟಾಗುವುದು. ಆ ದಿವ್ಯಜ್ಞಾನದ ಫಲವಾಗಿ ಆತ್ಮನು ಸುಷುಮ್ನಾನಾಡಿಯ ಮೂಲಕ ಈ ಭೌತಶರೀರವನ್ನು ತ್ಯಜಿಸಿ ಭಗವಂತನನ್ನು ಸೇರುವನು. ಅಂದರೆ ಸಮಸ್ತ ದುಃಖಪರಂಪರೆಗಳನ್ನು ನಿರ್ಮೂಲಮಾಡಿ ಮೋಕ್ಷಮಾರ್ಗದಲ್ಲಿ ಆತ್ಮನನ್ನು ನಿಲ್ಲಿಸತಕ್ಕ ದಿವ್ಯ ಜ್ಞಾನವು ಲಭ್ಯವಾಗುವುದಕ್ಕೆ ಭಗವಂತನ ಅನುಗ್ರಹಸಂಕಲ್ಪವೇ ಕಾರಣ.

ಸೂತ್ರಧಾರಪರಿಪುಷ್ಟವಾದ ಈ ಮಾರ್ಗವೇ ತಮ್ಮ ಸಿದ್ಧಾನ್ತಕ್ಕೆ ವಿಶೇಷವಾದ ಗುಣವೆಂಬುವನ್ನು ತಾವು ಕೊಟ್ಟಿರುವ ಹೆಸರಿನಿಂದ ಸೂಚಿಸಿದ್ದಾರೆ. ಅಲ್ಲದೆ ಆಚಾರ್ಯರು ಹೆಸರಿನಲ್ಲಿ ಚಂದ್ರನಿಗೆ ಬದಲಾಗಿ ಸೂರ್ಯನನ್ನೂ (ಮೋಕ್ಷ)ಸಾಧನಗಳಲ್ಲಿ ಪ್ರಬೋಧಕ್ಕೆ ಬದಲಾಗಿ ಸಂಕಲ್ಪವನ್ನೂ ಉಪಯೋಗಿಸಿಕೊಂಡಿರುವುದು ಬಹು ಸ್ವರಸವೂ ಸಮಂಜಸವೂ ಆಗಿದೆ. ಮೋಕ್ಷಮಾರ್ಗಗಳಲ್ಲಿ ಚಂದ್ರನು ಅರ್ಚಿರಾದಿ ಧೂಮಾದಿ ಮಾರ್ಗಗಳೆರಡಕ್ಕೂ ಸಾಧನಗಳ ವ್ಯತ್ಯಾಸದಿಂದ ಸಮಾನನಾಗುವನೆಂದೂ ಸೂರ್ಯನು ಏಕಮಾತ್ರಸ್ಥಾನವನ್ನು ಪಡೆದಿರುವನೆಂದೂ ತಿಳಿಯಪಡಿಸುವುದು ಅವರ ಮುಖ್ಯೋದ್ದೇಶವಿರಬೇಕು. ಅಲ್ಲದೆ ಧಾರ್ಮಿಕಪ್ರಪಂಚದಲ್ಲಿ ಸಾಮಾನ್ಯವಾಗಿ ಸಂಸಾರವನ್ನು ರಾತ್ರಿಗೆ ಹೋಲಿಸಿರುತ್ತಾರೆ. ಚಂದ್ರೋದಯದಿಂದ ಈ ಸಂಸಾರನಿಶಿಯ ಅಂಧಕಾರವು ನಾಶವಾಗಬಹುದೇ ವಿನಾ ರಾತ್ರಿಯೇ ನಾಶವಾಗುವುದಿಲ್ಲ. ರಾತ್ರಿಯೇ (ಸಂಸಾರವೇ) ನಾಶವಾಗಬೇಕಾದರೆ ಸೂರ್ಯೋದಯವೇ ಆಗಬೇಕು. ಆದುದರಿಂದ ಭಗವಂತನ ಅನುಗ್ರಹಸಂಕಲ್ಪ ಸೂರ್ಯೋದಯದಿಂದ ಸಂಸಾರರಾತ್ರಿಯು ನಾಶವಾಗುವುದು ಎಂಬುದನ್ನು ಸೂಚಿಸುವುದು ಬಹಳ ಸ್ವಾರಸ್ಯವಾಗಿದೆ.

ಇನ್ನು ನಾಟಕದ ಪ್ರಮಾಣದ ವಿಷಯ. ಇದು ಅಪ್ರಯೋಜಕವಾಗಿ ಬಹು ವಿಲಂಬಿಸಲ್ಪಟ್ಟಿದೆಯೆಂಬುದು ಕೆಲವರ ಮತ (ನಮಗೂ ಕೆಲವೆಡೆಯಲ್ಲಿ ಹಾಗೆಯೇ ತೋರುತ್ತದೆ). ಆದರೆ ಆಚಾರ್ಯರು ಈ ನಾಟಕವನ್ನು ಅಖಿಲಜಗತ್ಸೂತ್ರಧಾರನಾದ ಶ್ರೀಮನ್ನಾರಾಯಣನಿಗೆ ಅರ್ಪಿಸಿದ್ದಾರೆ. ಅವನಿಗೆ ಅರ್ಪಿಸಿರುವ ಈ ನಾಟಕದಲ್ಲಿ ಅವನು ನಟಿಸಿದ ಹತ್ತು ಅಂಕಗಳ ಛಾಯೆಯೇ ಇರಬೇಕೆಂದು ಆಚಾರ್ಯರ ಅಭಿಪ್ರಾಯವಿರಬೇಕು. ಅಲ್ಲದೆ ನಾಟಕಕ್ಕೆ ಪ್ರಧಾನವಾದುದು ಶಾಂತರಸ. ಈ ರಸವು ಸರಿಯಾದ ಪೂರ್ವಸಿದ್ಧತೆಯೂ ವ್ಯವಸಾಯವೂ ಇಲ್ಲದೆ ಥಟ್ಟನೆ ದ್ಯೋತಿತವಾಗತಕ್ಕದ್ದಲ್ಲ. ನಾಟಕವು ಸಂಕಲ್ಪಸೂರ್ಯೋದಯದೊಂದಿಗೆ ಮುಕ್ತಾ

ಯವಾಗಬೇಕು. ಈ ದೃಷ್ಟಿಯಿಂದ ನಾಟಕವು ಪೂರ್ಣವಾಗಿ ರಾತ್ರಿಯೆಲ್ಲ ಅಭಿನಯಿಸಲ್ಪಟ್ಟು ಪ್ರಭಾತಸೂರ್ಯೋದಯಕ್ಕೆ ಸರಿಯಾಗಿ ಮುಗಿಸುವುದ ರಿಂದ ಸೂರ್ಯೋದಯದ ಭಾವನೆಯು ಸಮಂಜಸವಾಗಬಹುದೆಂಬ ಅಭಿ ಪ್ರಾಯದಿಂದಲೂ ಹೀಗೆ ಮಾಡಿರಬಹುದು.

ಈ ನಾಟಕದ ಜೋಡಣೆಯು ಶಾರೀರಕ ಸೂತ್ರದ ಜೋಡಣೆಗೆ ಸ್ವಲ್ಪ ಹೋಲುತ್ತದೆ. ಮೊದಲನೆಯ ಅಂಕವು ಶಾರೀರಕಸೂತ್ರದ ಸಮನ್ವಯಾಧ್ಯಾಯಕ್ಕೆ ಸರಿಹೋಗುತ್ತದೆ. ಇದರಲ್ಲಿ ವೇದಾಂತಶಾಸ್ತ್ರದ ಸಾಮಾನ್ಯ ತತ್ತ್ವಗಳೆಲ್ಲಾ ಸೂತ್ರೀಕೃತವಾಗಿವೆ. ಎರಡನೆಯ ಅಂಕವು ಅವಿರೋಧಾಧ್ಯಾಯದಂತಿದೆ. ದರ್ಶನಾಂತರಗಳ ದೋಷಗಳು ಇದರಲ್ಲಿ ನಿರೂಪಿತವಾಗಿವೆ. ಮೂರರಿಂದ ಒಂಬತ್ತನೆಯ ವರೆಗಿನ ಆರು ಅಂಕಗಳಲ್ಲಿ ವೈರಾಗ್ಯ ತಪಸ್ಸು ಮೊದಲಾದ ಸಾಧನವಿಷಯಗಳನ್ನು ಪ್ರಸ್ತಾಪಿಸಿದೆ. ಶಾರೀರಕ ಸೂತ್ರದಂತೆಯೇ ಕೊನೆಯದಾದ ಹತ್ತನೆಯ ಅಂಕವು ಫಲ ಪ್ರಾಪ್ತಿಯ ವಿವರಣೆ.

ಈ ನಾಟಕದಲ್ಲಿ ಬರುವ ಪಾತ್ರಗಳೆಲ್ಲ ಆಕಾರವಿಲ್ಲದ ಧರ್ಮ ಗಳು ಮತ್ತು ಗುಣಗಳು. ಆದರೂ ಅವು ರಂಗಸ್ಥಳಕ್ಕೆ ಬಂದಾಗ ಆಯಾ ಧರ್ಮಾನುಯಾಯಿಗಳೂ ಮತ್ತು ಗುಣಾವಲಂಬಿಗಳೂ ಆಗಿ ಕಾಣುವುದ ರಿಂದ ಸಾಕಾರವಾಗಿಯೂ ಜೀವಂತವಾಗಿಯೂ ಕಾಣುವುವು. ನಾಯ ಕಾದಿಪಾತ್ರಗಳಿಗೆ ಬೇಕಾದ ಸಕಲ ಲಕ್ಷಣಗಳೂ ಅವುಗಳಲ್ಲಿರುತ್ತವೆ. ಉದಾ ಹರಣೆಗಾಗಿ ಮುಂದಿನ ವಿವೇಕ ಮತ್ತು ಲೋಭ ವರ್ಣನೆಯನ್ನು ನೋಡಿ.

ವಿವೇಕ—

ಮಹಾಸತ್ತ್ವೋದಾರ ಸ್ಥಿರಮಧುರಗಂಭೀರಹೃದಯಃ
ಕೃಪೋತ್ಸಾಹೋತ್ತುಂಗಃ ಕೃತವಿದಭಿಗಮ್ಯಃ ಪ್ರಣಯಿನಾಮ್ ।
ಶ್ರುತಪ್ರಜ್ಞಾಮೇಧಾ ಸ್ಮೃತಿಜಲಧಿರಕ್ಷುದ್ರಚರಿತ-
ಸ್ತ್ವಮೇಕಸ್ಸರ್ವಾಸಾಮನಘಫಣಿತೀನಾಮಭಿಮತಃ ॥

ಧೀರೋದಾತ್ತಾನುಕೂಲೋತ್ತಮಗುಣಮಹಿಮಾ ನಾಯಕೇಷ್ವಗ್ರಣೀಸ್ತ್ವಂ
ಸ್ವಾಧೀನಾ ತ್ವತ್ಸನಾಥಾ ಸುಮತಿರಭಿಮತಾ ಧರ್ಮಪತ್ನೀ ತವಾಸೌ
ಸ್ವಾಯತ್ತಾ ಚಾದ್ಯ ಸಿದ್ಧಿಸ್ಸಮಜನಿ ಭವತಸ್ಸ್ವಾಮಿನಿಶ್ಶ್ರೇಯಸಾರ್ಥಾ
ರಾಮಸ್ತ್ವಂ ಚ ತ್ರಿಲೋಕ್ಯಾಂ ರಣವಿಹೃತಿಮುಖೈರಪ್ರಧೃಷ್ಯಾನುಭಾವಃ ॥

ಲೋಭ—

ಧರ್ಮಧ್ವಂಸಧುರಂಧರಶ್ಶಮದಮಪ್ರಾರಂಭಸರ್ವಙ್ಕಷಃ
ಪ್ರಜ್ಞಾವಾರಿಧಿಘಸ್ಮರಃ ಪ್ರಣಿದಧತ್ಪ್ರತ್ಯೂಹ ಮೃತ್ಯುಞ್ಜಯಃ ।
ಮುಕ್ತಿಪ್ರಾರ್ಥನಮೋಚನಾಯ ಮಹತಾಂ ಮೋಹೇನ ಸಂಪ್ರೇಷಿತಃ
ತೃಷ್ಣಾವಾರವಿಲಾಸಿನೀಸಹಚರೋ ಲೋಭಃ ಕಿಲೋದೀಯತೇ ॥

ಸಮ್ಪ್ರದಾಯಬದ್ಧವಾದ ಎಲ್ಲಾ ನಾಟಕಗಳಲ್ಲಿಯೂ ಹಾಸ್ಯ ರಸೋತ್ಪಾದನೆಗಾಗಿ ವಿದೂಷಕನ ಪಾತ್ರವನ್ನು ಉಪಯೋಗಿಸುವುದು ರೂಢಿಯಾಗಿದೆ. ಆದರೆ ಆಚಾರ್ಯರು ಈ ನಾಟಕದಲ್ಲಿ ವಿದೂಷಕನ ಪಾತ್ರವನ್ನು ಉಪಯೋಗಿಸದಿದ್ದರೂ ಹಾಸ್ಯರಸವನ್ನುಂಟುಮಾಡುವ ಅನೇಕ ಸನ್ನಿವೇಶಗಳನ್ನು ತಂದಿದ್ದಾರೆ. ನಾಲ್ಕೈದನೆಯ ಅಂಕಗಳಲ್ಲಿ ಬರುವ ಕಾಮ, ದರ್ಪ ಮೊದಲಾದವರ ಪ್ರತಾಪಾಡಂಬರಗಳು ಇವುಗಳಿಗೆ ಉತ್ತಮ ಉದಾಹರಣೆಗಳು. ಮುಂದಿನ ಕಾಮನ ಪ್ರತಾಪವನ್ನು ನೋಡಿ-

ಇಕ್ಷುಃ ಪೇಶಲವಿಗ್ರಹಶ್ಚ ಮಮ ಧನುಃ ಪುಷ್ಪಾಣ್ಯಮೀ ಸಾಯಕಾಃ
ತನ್ತ್ರೀ ಮಞ್ಜುಲನಿಸ್ವನಾ ಮಧುಕರಶ್ರೇಣೀ ಶುಭಾಙ್ಗಿನೀ ।
ಭೀರುಸ್ಸ್ತ್ರೀಜನೋ ಮಮ ಬಲಂ ತಥ್ಯಂ ಪರಂ ಕಥ್ಯತೇ
ಸೋಽಹಂ ನಿರ್ಜಿತಶೂಲಭೃತ್ಪ್ರಭೃತಿಕಸ್ಸಙ್ಕಲ್ಪಸಿದ್ಧೋದಯಃ ॥

ದಮ್ಭನ ಪ್ರತಾಪ—

ಮಯಿ ಚರತಿ ಕದಾಚಿತ್ಸತ್ಯಲೋಕೋಪಕಣ್ಠೇ
ಸಪದಿ ಸನಕಮುಖ್ಯೈಃ ಸಾಕಮಭ್ಯುಜ್ಜಿಹಾನಃ ।
ಸವಿನಯನಿಭೃತಾಙ್ಗಃ ಸಪ್ತಶಃ ಕ್ಷಾಲಿತೇನ
ಸ್ವಯಮುದವಹದರ್ಘ್ಯಂ ಪಾಣಿನಾ ಪದ್ಮಯೋನಿಃ ॥

ದರ್ಪ—

ತುಣ್ಡೀರಂ ಮಂಡಲಂ ಮೇ ಕುಲಪತಿರಪಿಚ [1] ಸ್ಕನ್ದಭೂಪಾಲವಂಶ್ಯಃ
ಕ್ಷೇತ್ರಂ ಸತ್ಯವ್ರತಾಖ್ಯಂ ಕ್ಷಿತಿತಲತಿಲಕಂ ಕ್ಷುದ್ರಕಾಞ್ಚ್ಯಗ್ರಹಾರಃ
ಪ್ರಖ್ಯಾತಶ್ಶಿಷ್ಯಭೂಮ್ನಾ ದಿಶಿದಿಶಿ ಭವತಾ ಕೂಪಕೂರ್ಮೋಪಮೇನ
ಸ್ಥಾತಾ ವಾದಾಹವೇಷು ಸ್ಥವಿರ ಕಥಮಹಂ ನ ಶ್ರುತೋ ನಾಪಿ ದೃಷ್ಟಃ ॥

ಮೇಲಿನ ಶ್ಲೋಕಗಳಲ್ಲಿ ಹಾಸ್ಯವೇ ಅಲ್ಲದೆ ಉದ್ದೇಶಪೂರ್ವಕವಾದ ವಿಡಂಬನವೂ ಇರುವಂತೆ ಕಾಣುತ್ತದೆ. ಆಚಾರ್ಯರ ಕಾಲವು ಧರ್ಮದೃಷ್ಟಿಯಿಂದ ಒಂದು ಸಂಧಿಸಮಯ. ವೈದಿಕಮತವು ಕ್ಷೀಣಸ್ಥಿತಿಯಲ್ಲಿದ್ದಂತೆ ಕಾಣುತ್ತದೆ. ವಿರೋಧತತ್ತ್ವಗಳನ್ನುಳ್ಳ ಭಿನ್ನಭಿನ್ನಮತಗಳು ಅಲ್ಲಲ್ಲೇ ಪ್ರಚಾರದಲ್ಲಿದ್ದುದರಿಂದ ಚಂಚಲರೂ ವಿಚಾರಶೂನ್ಯರೂ ಆದ ಒಂದೇ ಕುಟುಂಬದ ಜನರು ಭಿನ್ನಭಿನ್ನಮತಗಳನ್ನು ಅವಲಂಬಿಸಿದ್ದಂತೆ ಕಾಣುತ್ತದೆ. ಅದನ್ನು ಆಚಾರ್ಯರು ಮುಂದಿನ ಶ್ಲೋಕದಲ್ಲಿ ಬಹು ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ—

ಶ್ವಶ್ರೂರಸ್ಯ ದಿಗಮ್ಬರವ್ರತವತೀ ಸಮ್ಬನ್ಧಿನಸ್ಸೌಗತಾಃ
ಮಾತಾ ಚಾಸ್ಯ ಪಿತಾ ಚ ಪಾಶುಪತಿನೌ ವೈದೇಶಿಕೋ ದೇಶಿಕಃ ।
ಜಾಯಾ ತಿಷ್ಠತಿ ಸಾಙ್ಖ್ಯಯೋಗಸಮಯೇ ಚಾರ್ವಾಕಶಿಷ್ಯಸ್ಸಖಾ
ಮಿಥ್ಯಾಚಾರಸಮಾಹ್ವಯಸ್ಸ್ವಯಮಸೌ ವಿಪ್ಲಾವಕೋ ವೈದಿಕಃ ॥

ಭಿನ್ನಮತಗಳ ಔತ್ಕರ್ಷಕೋಲಾಹಲದಲ್ಲಿ ಜನಗಳಿಗೆ ಬರಿಯ ಬಾಹ್ಯಾಡಂಬರದಲ್ಲಿ ವಿಶೇಷಗಮನವು ಹೆಚ್ಚಿ ತಥ್ಯಾಂಶವನ್ನು ಮರೆತು ಸ್ವಮತಾಭಿವೃದ್ಧಿಗಾಗಿ ಅನೇಕ ನಿಂದನೀಯವಾದ ಕೆಲಸಗಳನ್ನು ಮಾಡುತ್ತಿದ್ದಂತೆ ಕಾಣುತ್ತದೆ. ವೈರಾಗ್ಯವೇ ಮೂರ್ತಿವೆತ್ತಂತಿದ್ದ ಆಚಾರ್ಯರಿಗೆ ಇದು ಬಹಳ ಅಸಹ್ಯವೂ ಹೇಯವೂ ಆಗಿ ಕಂಡಿರಬೇಕು. ಅದಕ್ಕಾಗಿ ಅವರು ಮುಂದಿನ ಶ್ಲೋಕಗಳಲ್ಲಿ ಅವನ್ನು ಬಹಳವಾಗಿ ಅವಹೇಳನ ಮಾಡಿದ್ದಾರೆ.

---

[1] ಈ ಸ್ಕಂದಭೂಪಾಲನು ಕಂಚಿಯಲ್ಲಿ ಆಳುತ್ತಿದ್ದ ಪಲ್ಲವವಂಶೀಯನಾದ ರಾಜನೋ ಒಬ್ಬ ಸಾಮಾನ್ಯ ಪಾಳೆಯಗಾರನಾಗಿರಬೇಕು.

ಅಪಟುಫಣಿತಿಭಾವಾತ್ ಬಿಭ್ರತೋ ಮೌನಮುದ್ರಾಂ
ಅನಿತರಶರಣತ್ವಾದಾದೃತಾನ್ಯೋನ್ಯಸಙ್ಗಾಃ ।
ಅಗತಿವಿಹಿತಭಿಕ್ಷಾವೃತ್ತಯಃ ಕೇಚಿದೇತೇ
ಚಿರವಿಧೃತತುರಙ್ಗಬ್ರಹ್ಮಚರ್ಯಾ ಮಹಾನ್ತಃ ॥

ಡಮ್ಭಸ್ಯೇವ ಧ್ವಜಮುಮಿತಯಾ ಮಣ್ಡಿತಂ ಧರ್ಭಮುಷ್ಟ್ಯಾ
ದ್ರಾಘೀಯಾಂಸಂ ಕಮಪಿ ಪುರತಸ್ಸಂಪ್ರತಿಷ್ಠಾಪ್ಯ ದಣ್ಡಮ್ ।
ಪಾದೋಪಾನ್ತಪ್ರಣಿಹಿತಧನಾನ್ಪ್ರಾಣಿನೋ ಭಕ್ತಿನಮ್ರಾನ್
ನಾವೇಕ್ಷನ್ತೇ ಕಿತವಮುನಯೋ ನಾಮತಸ್ತೀರ್ಥಪಾದಾಃ ॥

ಭಿಕ್ಷೇತಿ ಶಿಷ್ಯಜನರಕ್ಷಣದಕ್ಷಿಣೇತಿ
ಶಾಟೇತಿ ಶಾಶ್ವತಮಠೋಪಧಿಕಲ್ಪನೇತಿ ।
ಗ್ರನ್ಥೋಪಸಂಗ್ರಹಣಮೂಲ್ಯಮಿತಿ ಬ್ರುವಾಣಾಃ
ಸಂನ್ಯಾಸಿನೋಽಪಿ ದಧತೇ ಸತತಂ ಧನಾಯಾಮ್ ॥

ಈ ಶ್ಲೋಕಗಳು ಮೇಲೆ ನೋಡುವುದಕ್ಕೆ ಹಾಸ್ಯಯುಕ್ತವಾಗಿದ್ದರೂ ದಾರಿತಪ್ಪಿ ಮೇಲಿನ ಸ್ಥಿತಿಯಲ್ಲಿರುವವರಿಗೆ ಎಂತಹ ಹೃದಯಶಲ್ಯವೆಂಬುದನ್ನು ಸುಲಭವಾಗಿ ಊಹಿಸಿಕೊಳ್ಳಬಹುದು.

ಆಚಾರ್ಯರ ಅಭಿಪ್ರಾಯದಂತೆ ಈ ನಾಟಕದಲ್ಲಿ ಪ್ರಧಾನವಾದುದು ಶಾಂತರಸ. ಅದು ಇತರ ಎಲ್ಲ ರಸಗಳಿಗಿಂತಲೂ ಶ್ರೇಷ್ಠವಾದುದೆಂತಲೂ ಮೋಕ್ಷಸಂಪಾದನೆಗೆ ಸರ್ವೋತ್ತಮವಾದುದೆಂತಲೂ ನವರಸಕ್ಕೂ ಅದು ಆಕರವೆಂತಲೂ ಮುಂದಿನ ಶ್ಲೋಕದಲ್ಲಿ ಹೇಳಿದ್ದಾರೆ.

ಜುಗುಪ್ಸಾಂ ದೇಹಾದೌ ವಿಷಯರಸಭೋಗೇಷು ಹಸನಂ
ಪ್ರಕೋಪಂ ನಿದ್ರಾದೌ ಪರಪುರುಷವಾದಾದಿಷು ಭಯಮ್ ।
ಶುಚಂ ಯೋಗಾಲಾಭೇ ಫಲಪರಿಣತೌ ವಿಸ್ಮಯಮಪಿ
ಪ್ರಯಚ್ಛತ್ಯುತ್ಸಾಹಂ ದುರಿತವಿರತೌ ಬ್ರಹ್ಮಣಿ ರತಿಮ್ ॥

ಆದರೆ ನಾಟಕದ ಕೊನೆಯ ಮೋಕ್ಷಪ್ರಾಪ್ತಿಯಲ್ಲಿ ಶಾಂತರಸವುದ್ಯೋತಿತವಾದರೂ ನಾಟಕದ ಮೊದಲಿನಿಂದ ಸುಮಾರು ಎಂಟನೆಯ ಅಂಕದವರೆಗೆ

